KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೧೮, ೨೦೦೯ (ಜ್ಯೇಷ್ಠ ೨೮, ಶಕ ವರ್ಷ ೧೯೩೧) | ಸಂಚಿಕೆ ೨೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಬಳಕೆಗೆ ಒಂದು ಹೊಸ ಕಾರನ್ನು ಖರೀದಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಪ್ರಧಾನ ವ್ಯವಸ್ಥಾಪಕರು ಕೆಬಿಟ್ಸ್‌ರವರ ಪತ್ರ ಸಂಖ್ಯೆ ಕೆಬಿಟ್ಸ್ ಎಸಿಟಿ 03 2008–09, ದಿನಾಂಕ: 2.3.2009 ಮತ್ತು ದಿನಾಂಕ: 7.3.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಪತ್ರದಲ್ಲಿ ಪ್ರಧಾನ ವ್ಯವಸ್ಥಾಪಕರ ಬಳಕೆಗೆ ಒಂದು ಹೊಸ ಕಾರನ್ನು ಖರೀದಿಸಲು ಅದ್ವೈತ್ ಮೋಟಾರ್ ಪ್ರೈ.ಲಿ. ಸಂಸ್ಥೆಯಿಂದ ದಿನಾಂಕ: 3.3.2009 ರಂದು ಇನ್ವೈಸ್‌ನ್ನು ಪಡೆಯಲಾಗಿದೆ ಎಂದು ತಿಳಿಸುತ್ತಾ, ಅದರಂತೆ ಒಂದು ಹೊಸ ಹುಂಡೈ ಎಸೆಂಟ್ ಜಿಎಲ್‌ಇ ಕಾರನ್ನು ರೂ. 4,99,003/–ಗಳ ಬೆಲೆಯಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ ಅದರ ಜೊತೆಗೆ ರೂ. 70,000/–ಗಳ ರಸ್ತೆ ತೆರಿಗೆ ಮತ್ತು ವಾಹನದ ವಿಮೆ ವೆಚ್ಚ ಭರಿಸಲು ಅವಶ್ಯವಿರುತ್ತದೆಂದು ಎಂದು ತಿಳಿಸುತ್ತಾ, ಒಟ್ಟು ರೂ. 6,00,000/– ಗಳ ವೆಚ್ಚದಲ್ಲಿ ಹೊಸ ಕಾರನ್ನು ಖರೀದಿಸಲು ಹಾಗೂ ಹಣ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 20 ಅಡವಿ 2009, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಬಳಕೆಗೆ ರೂ. 6,00,000/–ಗಳ ವೆಚ್ಚದಲ್ಲಿ ಒಂದು ಹೊಸ ಹುಂಡೈ ಎಸೆಂಟ್ ಜಿಎಲ್‌ಇ ಕಾರನ್ನು ಖರೀದಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಸದರಿ ಉದ್ದೇಶಕ್ಕಾಗಿ 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು (ಯೋಜನೆ)'** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ರೂ. 6.00 ಲಕ್ಷಗಳನ್ನು [ರೂ. ಆರು ಲಕ್ಷಗಳು ಮಾತ್ರ] ಕೆಬಿಟ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ವಿತರಿಸಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರಿಗೆ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 29 ವೆಚ್ಚ–2/2009, ದಿನಾಂಕ: 17.02.2009 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 852

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಬೆಳಗಾಂನ ಕೇಂದ್ರಿಯ ವಿದ್ಯಾಲಯ ಇವರಿಗೆ ಭೂಮಿಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಅರೆ ಸರ್ಕಾರಿ ಪತ್ರ ಸಂಖ್ಯೆ:ಕ್ರ.ಆರ್‌ಬಿ:ಎಲ್‌ಬಿಪಿ:ವಿವ:274/2006–07, ದಿನಾಂಕ: 27.05.2008.

2. ಪತ್ರ ಸಂಖ್ಯೆ: ಕೆಂಪಸ: ಸಿಬ್ಬಂದಿ: ಸಿಆರ್–3: 2007–08 ದಿನಾಂಕ: 04.07.2008.

**ಪ್ರಸ್ತಾವನೆ:**

ಬೆಳಗಾವಿಯಲ್ಲಿ ಕೇಂದ್ರೀಯ ವಿದ್ಯಾಲಯ–3 ನ್ನು 2007–08ರಲ್ಲಿ ಪ್ರಾರಂಭವಾಗಿದ್ದರೂ, ಈ ಶಾಲೆಯನ್ನು ಮರಾಠ ಮಂಡಳ ಇವರಿಗೆ ಸೇರಿದ ಖಾಸಗಿ ಕಟ್ಟಡವೊಂದರಲ್ಲಿ ನೆಡೆಸುತ್ತಿರುವುದಾಗಿ ತಿಳಿಸುತ್ತಾ, ವಿದ್ಯಾರ್ಥಿಗಳ ಅನುಕೂಲತೆಗಾಗಿ ಶಾಲಾ ಕಟ್ಟಡ ಮತ್ತು ಆಟದ ಮೈದಾನ ನಿರ್ಮಿಸಲು ನಿರಾಶ್ರಿತರ ಪರಿಹಾರ ಕೇಂದ್ರ, ಮಚ್ಛೆ–ಬೆಳಗಾವಿ ಇವರಿಗೆ ಸೇರಿದ 10 ಎಕರೆ ವಿಸ್ತೀರ್ಣ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ಬಿಟ್ಟುಕೊಡುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಳಗಾವಿ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರ ಬರೆಯುತ್ತಾ, ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು ಇವರು ದಿನಾಂಕ:02.06.2008ರಲ್ಲಿ ನಡೆದ ಸಮಿತಿ ಸಭೆಯಲ್ಲಿ ಕೇಂದ್ರಿಯ ವಿದ್ಯಾಲಯ–3, ಬೆಳಗಾಂ ಇವರಿಗೆ 08.00 ಎಕರೆಗಳ ವಿಸ್ತೀರ್ಣದ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ನೀಡಲು ನಿರ್ಣಯಿಸಿರುವುದಾಗಿ ತಿಳಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 12 ಎಸ್‌ಬಿಆರ್ 2008, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2009**

ನಿರಾಶ್ರಿತರ ಪರಿಹಾರ ಕೇಂದ್ರಕ್ಕೆ ಸೇರಿದ ಬೆಳಗಾವಿ ತಾಲ್ಲೂಕಿನ ಮಚ್ಛೆ ಗ್ರಾಮದ ಸರ್ವೆ ನಂ:489/2ರ ಜಮೀನಿನಲ್ಲಿ ಕೇಂದ್ರಿಯ ವಿದ್ಯಾಲಯ–3 ಬೆಳಗಾವಿ–ಇವರಿಗೆ 08.00 ಎಕರೆ ವಿಸ್ತೀರ್ಣದ ಭೂಮಿಯನ್ನು ಪ್ರತಿ ಎಕರೆಗೆ, ಪ್ರತಿ ವರ್ಷಕ್ಕೆ ರೂ.100.00 ಪಾವತಿಸಿರುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಕಂದಾಯ ಇಲಾಖೆ ಹಾಗೂ ಆರ್ಥಿಕ ಇಲಾಖೆ ಸಹಮತಿಯನ್ನು ಅನುಕ್ರಮವಾಗಿ ಟಿಪ್ಪಣಿ ಸಂಖ್ಯೆ: ಆರ್‌ಡಿ 68 ಎಲ್‌ಕೆಎಲ್ 2007, ದಿನಾಂಕ: 20.01.2009 ಹಾಗೂ ಸಂಖ್ಯೆ:ಆಇ 178 ವೆಚ್ಚ–3/09, ದಿನಾಂಕ: 26.02.2009 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 853

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2, ಸಮಾಜ ಕಲ್ಯಾಣ ಇಲಾಖೆ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆ, ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಶ್ರೀ ಎಂ. ಶ್ರೀನಿವಾಸ್, ಶಾಸಕರು, ರಾಜರಾಜೇಶ್ವರಿನಗರ ವಿಧಾನಸಭಾ ಕ್ಷೇತ್ರ ಇವರ ಪತ್ರ ದಿನಾಂಕ: 17.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮಾನ್ಯ ಮುಖ್ಯ ಶಾಸಕರು, ರಾಜರಾಜೇಶ್ವರಿನಗರ ವಿಧಾನಸಭಾ ಕ್ಷೇತ್ರ, ಇವರು **ಬೆಂಗಳೂರು ನಗರ ಜಿಲ್ಲೆ, ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ರಾಷ್ಟ್ರೀಯ ಹೆದ್ದಾರಿ 209ರಿಂದ ರಾಜೀವಗಾಂಧಿ ನವನಗರ ಕಾಲೋನಿಯನ್ನು ಸಂಪರ್ಕಿಸುವ 1.50 ಕಿ.ಮೀ.ಉದ್ದದ** ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಕೋರಿರುತ್ತಾರೆ.

ಮಾನ್ಯ ಶಾಸಕರ ಕೋರಿಕೆಯ ಮೇರೆಗೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 259 ಸಿಆರ್‌ಎಂ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

**ಬೆಂಗಳೂರು ನಗರ ಜಿಲ್ಲೆ, ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ರಾಷ್ಟ್ರೀಯ ಹೆದ್ದಾರಿ 209ರಿಂದ ರಾಜೀವಗಾಂಧಿ ನವನಗರ ಕಾಲೋನಿಯನ್ನು ಸಂಪರ್ಕಿಸುವ 1.50 ಕಿ.ಮೀ. ಉದ್ದದ** ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ. (ಸಂಪರ್ಕ)

ಪಿ.ಆರ್. 905

**ತಿದ್ದುಪಡಿ ಆದೇಶ ಸಂಖ್ಯೆ.ಲೋಇ/01/ಇಎಪಿ/2009, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2009**

**ವಿಷಯ:** ರಾಜ್ಯದಲ್ಲಿನ ರಸ್ತೆ ಮೂಲಭೂತ ಸೌಕರ್ಯದ ಅಭಿವೃದ್ಧಿಗಾಗಿ ನೀತಿ ರಚನೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ.ಲೋಇ/01/ಇಎಪಿ/2009 ದಿನಾಂಕ 07–03–2009

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿನ ಆದೇಶ ಭಾಗದ ಅಂಶ 6 ರನ್ನು ತಿದ್ದುಪಡಿ ಮಾಡಲಾಗಿದ್ದು ಕೆಳಕಂಡಂತೆ ಓದಿಕೊಳ್ಳುವುದು.

"ಯೋಜನೆಗಳ ಪ್ರಗತಿಯ ಕುರಿತು ಪ್ರತಿ ಮೂರು ತಿಂಗಳಿಗೆ ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಕಾರ್ಯಪಡೆಯು (ಎಸ್‌ಎಲ್‌ಟಿಎಫ್) ಪರಿಶೀಲಿಸಿ ನಿಯಂತ್ರಿಸುವುದು. ಪ್ರತಿನಿತ್ಯದ ಪ್ರಗತಿ ಹಾಗೂ ಸಮಸ್ಯೆಗಳನ್ನು ನಿಯಂತ್ರಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾಮಟ್ಟದ ಕಮಿಟಿಯನ್ನು ಸ್ಥಾಪಿಸುವುದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 906

**ಸಹಕಾರ ಸಚಿವಾಲಯ**

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಗೆ ಮೂರನೇ ವರ್ಷದ ಕಂತಿನ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಎನ್‌ಸಿಡಿಸಿ, ನವದೆಹಲಿ ಪತ್ರ ಸಂಖ್ಯೆ : ಎನ್‌ಸಿಡಿಸಿ/ 3–11(4)/2001(86) ದಿನಾಂಕ: 03.08.2005.
2) ಸರ್ಕಾರಿ ಆದೇಶ ಸಂಖ್ಯೆ : ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 19.09.2006.
3) ಸರ್ಕಾರಿ ಆದೇಶ ಸಂಖ್ಯೆ : ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 08.11.2006.
4) ಸರ್ಕಾರಿ ಆದೇಶ ಸಂಖ್ಯೆ : ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 26.12.2007.
5) ಸರ್ಕಾರಿ ಆದೇಶ ಸಂಖ್ಯೆ : ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 04.11.2008.
6) ಸರ್ಕಾರಿ ಆದೇಶ ಸಂಖ್ಯೆ : ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 13.01.2009.
7) ಸಹಕಾರ ಸಂಘಗಳ ಜಂಟಿ ನಿಬಂಧಕರ (ಐಸಿಡಿಪಿ)ಪತ್ರ ಸಂಖ್ಯೆ: ಐಸಿಡಿಪಿ/ಗುಲ್ಬರ್ಗ–1/21/05–06 ದಿನಾಂಕ : 02.02.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆಯ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಯನ್ನು ರೂ.1398.67 ಲಕ್ಷಗಳ (ರೂ.248.70 ಲಕ್ಷಗಳ ಸಾಲ, ಮತ್ತೆ ರೂ.917.85 ಲಕ್ಷಗಳ ಷೇರು ಬಂಡವಾಳ ಹಾಗೂ ರೂ.232.12 ಲಕ್ಷಗಳ ಸಹಾಯಧನ) ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಎನ್‌ಸಿಡಿಸಿ, ನವದೆಹಲಿ ಒಪ್ಪಿಗೆ ನೀಡಿರುತ್ತದೆ. ಮೇಲೆ ಓದಲಾದ (2)ರ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಗೆ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಗೆ ಮೊದಲನೇ ವರ್ಷದ ಕಂತು ರೂ.349.66 ಲಕ್ಷಗಳ ಪೈಕಿ ರೂ.336.62 ಲಕ್ಷಗಳನ್ನು (ರೂ 38.11 ಲಕ್ಷಗಳ ಸಾಲ, ರೂ.285.48 ಲಕ್ಷಗಳ ಷೇರು ಬಂಡವಾಳ ಹಾಗೂ ರೂ.13.03 ಲಕ್ಷಗಳ ಸಹಾಯಧನ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ(3)ರ ಆದೇಶದಲ್ಲಿ ಮೊದಲನೇ ವರ್ಷದ ಕಂತಿನಲ್ಲಿ ಬಾಕಿ ಉಳಿದಿರುವ ರೂ.13.04 ಲಕ್ಷಗಳ ಸಹಾಯಧನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (4) ರ ಆದೇಶದಲ್ಲಿ 2ನೇ ವರ್ಷದ ಕಂತು ರೂ.345.095 ಲಕ್ಷಗಳನ್ನು (ರೂ.74.615 ಲಕ್ಷಗಳ ಸಾಲ, ರೂ.227.48 ಲಕ್ಷಗಳ ಷೇರು ಬಂಡವಾಳ ಹಾಗೂ ರೂ.43.00 ಲಕ್ಷಗಳ ಸಾಲ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಮೂರನೇ ವರ್ಷದ ಕಂತಿನ ಷೇರು ಬಂಡವಾಳವನ್ನು ಬಿಡುಗಡೆ ಮಾಡಬೇಕಾದರೆ 2008–2009ನೇ ಸಾಲಿನ ಆಯವ್ಯಯದಲ್ಲಿ ಲಭ್ಯವಿರುವ ಷೇರು ಬಂಡವಾಳದ ಅನುದಾನಕ್ಕಿಂತ ರೂ.30.54 ಲಕ್ಷಗಳಷ್ಟು ಹೆಚ್ಚಿಗೆ ಅಗತ್ಯವಿರುತ್ತದೆ. ಮೇಲೆ ಓದಲಾದ (5) ರ ಆದೇಶದಲ್ಲಿ ಹೆಚ್ಚುವರಿಯಾಗಿ ಅಗತ್ಯವಿರುವ ಷೇರು ಬಂಡವಾಳ ರೂ.30.54

ಲಕ್ಷಗಳನ್ನು ಲೆಕ್ಕ ಶೀರ್ಷಿಕೆ "4425–00–108–0–53–ಎನ್‌ಸಿಡಿಸಿ ಸಹಾಯದ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಯಡಿ ಷೇರು ಬಂಡವಾಳ ನೆರವು–211–ಬಂಡವಾಳ ಹೂಡಿಕೆ" ಇದಕ್ಕೆ ಲೆಕ್ಕ ಶೀರ್ಷಿಕೆ "6425–00–108–3–50–ಎನ್‌ಸಿಡಿಸಿ ಧನ ಸಹಾಯಕ್ಕಾಗಿ ಸಾಲ–ಪುರಸ್ಕೃತ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆ–394–ಸಾಲಗಳು" ಇದರಿಂದ ಮರುಹೊಂದಾಣಿಕೆ ಮಾಡಿಕೊಳ್ಳಲು ಮಂಜೂರಾತಿ ನೀಡಲಾಗಿರುತ್ತದೆ. ಮೇಲೆ ಓದಲಾದ (6) ರ ಆದೇಶದಲ್ಲಿ ಮರು ಹೋಂದಾಣಿಕೆ ಆದ ನಂತರ ಲೇಕ್ಕ ಶೀರ್ಷಿಕೆ "4425–00–108–0–53–ಎನ್‌ಸಿಡಿಸಿ ಸಹಾಯದ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಯಡಿ ಷೇರು ಬಂಡವಾಳ ನೆರವು–211–ಬಂಡವಾಳ ಹೂಡಿಕೆ(ಯೋಜನೆ)" ಅಡಿ ಲಭ್ಯವಿರುವ ರೂ.227.54 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (7) ರ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಐಸಿಡಿಪಿ) ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜನಾ ವರದಿಯಂತೆ ಇನ್ನೂ ಸಾಲ ರೂ.79.01 ಲಕ್ಷಗಳು ಹಾಗೂ ಸಹಾಯಧನ ರೂ.49.00 ಲಕ್ಷಗಳು ಮಂಜೂರಾಗಬೇಕಾಗಿದ್ದು ಸದರಿ ಹಣವನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಸದರಿ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ರೂ.79.00 ಲಕ್ಷಗಳ ಸಾಲವನ್ನು ಬಿಡುಗಡೆ ಮಾಡಲು ನಿರ್ಧರಿಸಲಾಗುತ್ತದೆ.

ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 111 ಸಿಎಲ್‌ಎಸ್ 2006, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಐಸಿಡಿಪಿ ಯೋಜನೆಯ ಅನುಷ್ಠಾನಕ್ಕಾಗಿ ಲೆಕ್ಕ ಶೀರ್ಷಿಕೆ "6425–00–108–3–50–ಎನ್‌ಸಿಡಿಸಿ ಧನ ಸಹಾಯಕ್ಕಾಗಿ ಸಾಲ–ಪುರಸ್ಕೃತ ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆ–394–ಸಾಲಗಳು" ಅಡಿ ಮೂರನೇ ವರ್ಷದ ಕಂತಿನಲ್ಲಿ ಸಾಲ ರೂ 79.00 ಲಕ್ಷಗಳನ್ನು (ರೂ.ಎಪ್ಪತ್ತೊಂಬತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಹಣ ಬಿಡುಗಡೆಗೆ ಸಂಬಂಧಪಟ್ಟಂತೆ ಸರ್ಕಾರಿ ಆದೇಶ ಸಂಖ್ಯೆ: ಸಿ.ಒ.111 ಸಿಎಲ್‌ಎಸ್ 2006 ದಿನಾಂಕ 13.01.2009 ರಲ್ಲಿ ಹೊರಡಿಸಲಾದ ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತವೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಐಸಿಡಿಪಿ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/49/ವೆಚ್ಚ–2/2009 ದಿನಾಂಕ 12.03.2009ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 907 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಸಿಆಸುಇ 1 ಸಅಸೇ 2009, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**

ಅಧಿಸೂಚನೆ ಸಂಖ್ಯೆ ಸಿಆಸುಇ 1 ಸಅಸೇ 2009, ದಿನಾಂಕ 13–9–2009 ರಲ್ಲಿನ ದಿನಾಂಕ 13–9–2009 ಎಂಬುದರ ಬದಲಾಗಿ ದಿನಾಂಕ 13–2–2009 ಎಂದು ದಿನಾಂಕ 13–2–2009 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 908 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹುದ್ದೆಗಳನ್ನು ಉನ್ನತೀಕರಿಸುವ/ನಿಮ್ನೀಕರಿಸುವ ಬಗ್ಗೆ

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ ಸಿಆಸುಇ 548 ಎಸ್‌ಎಎಸ್ 2008, ದಿನಾಂಕ 31–01–2009.

2) ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 548 ಎಸ್‌ಎಎಸ್ 2008, ದಿನಾಂಕ 26–02–2009.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಹಲವಾರು ಇಲಾಖೆಗಳ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ ಹುದ್ದೆಗಳಿಗೆ ಅಧಿಕಾರಿಗಳನ್ನು ವರ್ಗಾಯಿಸಿ ನೇಮಿಸಲಾಗಿದ್ದು ಮೇಲೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅಧಿಕಾರಿಗಳು ವರ್ಗಾವಣೆಗೊಂಡ ಹಿನ್ನಲೆಯಲ್ಲಿ ಕೆಲವು ಸರ್ಕಾರದ ಪ್ರಧಾನ ಕಾರ್ಯದರ್ಶಿ/

ಕಾರ್ಯದರ್ಶಿ ಹೊಸ ಹುದ್ದೆಗಳನ್ನು ಉನ್ನತೀಕರಿಸಿ/ನಿಮ್ನೀಕರಿಸಿ ಆದೇಶ ಹೊರಡಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 133 ಸಅಸೇ 2009, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಈ ಕೆಳಕಂಡ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳ ಹುದ್ದೆಗಳನ್ನು ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ:

1) ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)
2) ಸರ್ಕಾರದ ಕಾರ್ಯದರ್ಶಿ, ಸಾರಿಗೆ ಇಲಾಖೆ

ವೇತನ ಶ್ರೇಣಿ/ Band 4 ; ರೂ.37400–67000 + Grade pay ರೂ. 10000

ಕರ್ನಾಟಕ ಸರ್ಕಾರ ಸಚಿವಾಲಯದ ಈ ಕೆಳಕಂಡ ಇಲಾಖೆಗಳ ಕಾರ್ಯದರ್ಶಿಗಳ ಹುದ್ದೆಗಳನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

1) ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ
   (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
2) ಸರ್ಕಾರದ ಪ್ರಧಾನ ಕಾರ್ಯದರ್ಶಿ(ವೈದ್ಯಕೀಯ ಶಿಕ್ಷಣ)
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ವೇತನ ಶ್ರೇಣಿ/ Band 4 ; ರೂ.37400–67000 + Grade pay ರೂ. 12000

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 909

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ನ್ಯಾಯಾಂಗ ಅಧಿಕಾರಿಗಳಿಗೆ "Robe Allowance" ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ ಲಾ 124 ಎಲ್‌ಎಸಿ 1997, ದಿನಾಂಕ 17.11.2004.
2. ಶ್ರೀ ಕೆ.ಎಸ್. ಪುಂಡಲೀಕ (24–9–2008), ಶ್ರೀ ಎಸ್. ಎಲ್. ಪಾಟೀಲ್ (19–12–2008), ಶ್ರಿ ಆರ್. ಎಸ್. ಪಾಟೀಲ್ (22–4–2008) ಹಾಗೂ ಶ್ರೀ ಜಗದೀಶ್ ಎಸ್. ಚಿಕ್ಕಣ್ಣನವರ್ (11–2–2008) ಅವರುಗಳ ಮನವಿ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನ್ಯಾಯಾಂಗ ಇಲಾಖೆಗೆ ಸೇರಿದ ಅಧಿಕಾರಿಗಳಿಗೆ (ಜ್ಯುಡಿಷಿಯಲ್ ಆಫೀಸರ್ಸ್) ಐದು (5) ವರ್ಷಗಳಿಗೊಮ್ಮೆ ರೂ.5,000.00 ರಂತೆ "Robe Allowance" ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಕರ್ನಾಟಕ ಸರ್ಕಾರಿ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ನ್ಯಾಯಾಂಗ ಸೇವೆಯಿಂದ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಮೇಲೆ (2) ರಲ್ಲಿ ಓದಲಾದ ಮನವಿಗಳನ್ನು ಸಲ್ಲಿಸಿ, ಸರ್ವೋಚ್ಚ ನ್ಯಾಯಲಯವು ದಿನಾಂಕ 5.2.2008 ರಂದು ನೀಡಿದ ಆದೇಶದಂತೆ ನಿಯೋಜನೆ ಮೇಲಿರುವ ತಮಗೂ ಸಹ 5 ವರ್ಷಕ್ಕೊಮ್ಮೆ ರೋಬ್ ಅಲೋಯನ್ಸ್ ಮಂಜೂರು ಮಾಡುವಂತೆ ಕೋರಿದ್ದಾರೆ. ಅಧಿಕಾರಿಗಳ ಕೋರಿಕೆಯನ್ನು ಸರ್ವೋಚ್ಚ ನ್ಯಾಯಾಲಯದ ಆದೇಶದೊಂದಿಗೆ ಪರಿಶೀಲಿಸಲಾಗಿದೆ. ಅಖಿಲ ಭಾರತ ನ್ಯಾಯಾಧೀಶರ ಸಂಘವು ಸಲ್ಲಿಸಿದ ರಿಟ್ ಅರ್ಜಿ (ಸಿ) ಸಂಖ್ಯೆ 1022/1989 ರಲ್ಲಿ ಸಲ್ಲಿಸಲಾದ ವಾದಕಾಲೀನ ಅರ್ಜಿ ಸಂಖ್ಯೆ 213 ರಲ್ಲಿ ಸರ್ವೋಚ್ಚ ನ್ಯಾಯಲಯವು ದಿನಾಂಕ 5.2.2008 ರಂದು ಈ ಕೆಳಕಂಡಂತೆ ಆದೇಶ ನೀಡಿದೆ:

This application is filed by 6 officers working in the cadre of district judges in the Kerala state higher judicial service. It is contended that judicial officers while on deputation as law secretary, Registrar General, Registrars, Additional Registrar are denied the benefit of shetty commission recommendations, merely because they are working on deputation. The stand taken by the State Government is not correct. The officers continue to be judicial officers even though they are on deputation. The state government is, therefore, directed to pas appropriate orders within a period of 8 weeks extending the benefits to those Judicial officers who are working on deputation.

I.A is disposed of accordingly.

ಸರ್ವೋಚ್ಚ ನ್ಯಾಯಾಲಯದ ಮೇಲಿನ ಆದೇಶದನ್ವಯ ಸೇವೆಯ ಅಧಿಕಾರಿಗಳು ನಿಯೋಜನೆ ಮೇಲೆ ಬೇರೆಡೆ ಕಾರ್ಯ ನಿರ್ವಹಿಸುವಾಗಲೂ ಸಹ ನ್ಯಾಯಾಂಗ ಅಧಿಕಾರಿಗಳಾಗಿಯೇ ಮುಂದುವರೆಯುತ್ತಾರೆ. ಇದನ್ನು ಪರಿಗಣಿಸಿದ ಸರ್ಕಾರವು ನ್ಯಾಯಾಂಗ ಸೇವೆಯಿಂದ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಉಲ್ಲೇಖಿತ ಅಧಿಕಾರಿಗಳ ಮನವಿಯನ್ನು ಪರಿಗಣಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 154 ಸಅಸೇ 2008, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ವೋಚ್ಚ ನ್ಯಾಯಾಲಯವು ದಿನಾಂಕ 5.2.2008 ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನ್ಯಾಯಾಧೀಶರುಗಳಿಗೆ ಐದು ವರ್ಷಗಳಿಗೊಮ್ಮೆ ನೀಡಬೇಕಾದ ರೂ.5,000/–ರಂತೆ (ರೂಪಾಯಿ ಐದು ಸಾವಿರಗಳು ಮಾತ್ರ) "Robe Allowance"ನ್ನು ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಸಚಿವಾಲಯಕ್ಕೆ ಸಂಬಂಧಿಸಿದ "Salary Head Other Allowances" ನಿಂದ ಭರಿಸತಕ್ಕದ್ದು.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 573 ವೆಚ್ಚ – 5/2008, ದಿನಾಂಕ 11–6–2008 ರ ಅನ್ವಯ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿದ ನಂತರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 910

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಇಮುವಿ 2008, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

**ವಿಷಯ:** ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರನ್ನು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 20 ಈಮುವಿ 2008 ದಿನಾಂಕ 18.10.2008ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟಿರುವುದರಿಂದಲೂ,

ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರ ವಿರುದ್ಧ ಶಿಸ್ತಿನ ಕ್ರಮ / ಲೋಕಾಯುಕ್ತ ತನಿಖೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡೆಸಿ ಅವರನ್ನು ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 911

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೇಇವಿ 2008, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

**ವಿಷಯ:** ಶ್ರೀ. ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರನ್ನು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 6 ಸೇಇವಿ 2008 ದಿನಾಂಕ 29–04–2008 ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೇ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 912 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ. ಬಿ.ವಿ. ರಮೇಶ್, ಸರ್ಕಾರದ ಅಧೀನ ಕಾರ್ಯದರ್ಶಿ (ಅಮಾನತ್ತಿನಲ್ಲಿ), ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ ಮರು ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 195 ಎಸ್‌ಇಎನ್ 2007, ದಿನಾಂಕ 02.01.2009.

2) ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರ ಮನವಿ ದಿನಾಂಕ: 13/15/01/2009

**ಪ್ರಸ್ತಾವನೆ:**

ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ (ಪ್ರಸ್ತುತ ಅಮಾನತ್ತಿನಲ್ಲಿ), ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11(2) ರಂತೆ ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ನಿಯಮ 11(5)(ಸಿ)ರ ಅನ್ವಯ, ಶಾಖಾಧಿಕಾರಿ, ಸಿಆಸುಇ (ಸೇವೆಗಳು–ಇ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 02.01.2009 ರ ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ. ರಾಜಶೇಖರ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು, ಇವರು ಅನಾರೋಗ್ಯದ ಕಾರಣದಿಂದಾಗಿ, ತಾವು ಈ ಪ್ರಕರಣದ ವಿಚಾರಣಾಧಿಕಾರಿ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿ, ಈ ಪ್ರಕರಣದ ನಿಚಾರಣೆಯನ್ನು ಬೇರೊಬ್ಬರಿಗೆ ವಹಿಸುವಂತೆ ಕೋರಿರುತ್ತಾರೆ. ಬೇರೆ ವಿಚಾರಣಾಧಿಕಾರಿ ನೇಮಿಸುವ ಕುರಿತು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 195 ಎಸ್‌ಇಎನ್ 2007, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದಿಂದಾಗಿ, ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ (ಪ್ರಸ್ತುತ ಅಮಾನತ್ತಿನಲ್ಲಿ), ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ವಿಚಾರಣಾಧಿಕಾರಿಯವರನ್ನು ನೇಮಿಸಿ ಹೊರಡಿಸಿರುವ ದಿನಾಂಕ: 02.01.2009ರ ಆದೇಶವನ್ನು ಭಾಗಶಃ ಮಾರ್ಪಡಿಸಿ, **ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು** ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 07, ದಿನಾಂಕ 11.04.2008ರಲ್ಲಿ ನಿಗಧಿಪಡಿಸಿರುವ ಗೌರವಧನ ಹಾಗೂ ವಾಹನ ಭತ್ಯೆಗಳನ್ನು ಪಡೆಯುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–3) ಅವರು ಕ್ರಮ ಕೈಗೊಳ್ಳುತ್ತಾರೆ.

ಇನ್ನುಳಿದಂತೆ, ಶಾಖಾಧಿಕಾರಿ, ಸಿಆಸುಇ (ಸೇವೆಗಳು–ಇ) ಇವರನ್ನು ಮಂಡನಾಧಿಕಾರಿಯಾಗಿ ಮುಂದುವರಿಸಲಾಗಿದೆ.

ವಿಚಾರಣಾಧಿಕಾರಿಗಳು, ಅಪಾದಿತರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 913 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಹಾಗೂ ತತ್ಸಂಬಂಧಿತ ಸಾಮಗ್ರಿಗಳನ್ನು ಖರೀದಿಸಲು ಅನುಮತಿ ನೀಡಲು ಕುರಿತು.

**ಓದಲಾಗಿದೆ:** 1. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:Comp: 14:2007–08, ದಿನಾಂಕ: 02/04.08.2008.

2. ಇ–ಆಡಳಿತ ಸಚಿವಾಲಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 19.11.2008 ರಂದು ನಡೆದ ಸಭೆಯ ನಡವಳಿ.
3. ದಿನಾಂಕ: 12.01.2009 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಡವಳಿ.
4. ದಿನಾಂಕ: 21.02.2009 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆ ನಡವಳಿ ಸಂಖ್ಯೆ: ಡಿಪಿಎಆರ್ 15 ಇಜಿವಿ 2009, ದಿನಾಂಕ: 05.03.2009.
5. ದಿನಾಂಕ: 26.02.2009 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ: 02/04.08.2008ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ರಾಜ್ಯದಲ್ಲಿನ ಇಲಾಖೆಯ ಅಧೀನ ಕಛೇರಿಗಳ ದೈನಂದಿನ ಕೆಲಸ ಕಾರ್ಯಗಳನ್ನು ತ್ವರಿತಗತಿಯಲ್ಲಿ ನಿರ್ವಹಿಸಲು ಹಾಗೂ ಇ–ಸ್ಟಾಂಪಿಂಗ್. ಹೆಚ್.ಆರ್.ಎಂ.ಎಸ್. ಸೇರಿದಂತೆ ಇತರೇ ಉದ್ದೇಶಗಳಿಗಾಗಿ ಕಂಪ್ಯೂಟರ್ ಹಾಗೂ ಇತರ ಸಾಮಗ್ರಿಗಳ ಖರೀದಿಯ ತುರ್ತು ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ. ಈ ಕುರಿತು ಕನ್ಸಲ್‌ಟೆಂಟ್‌ರಾದ ಮೆ: Price Water House Coopers Pvt. Ltd., ಬೆಂಗಳೂರು ಇವರ ಮೂಲಕ ಕಂಪ್ಯೂಟರ್ ಇತ್ಯಾದಿ ಸಾಮಗ್ರಿಗಳ ಖರೀದಿ ಬಗ್ಗೆ ಕ್ರಿಯಾ ಯೋಜನೆಯನ್ನು ತಯಾರಿಸಿ ದ್ವಿಪ್ರತಿಯಲ್ಲಿ ಕಳುಹಿಸಿ ಸದರಿ ಕ್ರಿಯಾ ಯೋಜನೆಯನ್ನು ಪರಿಶೀಲಿಸಿ. ತಾಂತ್ರಿಕ ಅನುಮೋದನೆಗಾಗಿ ಇ–ಆಡಳಿತ ಇಲಾಖೆಗೆ ಕಳುಹಿಸಿ ಕೊಡಲು ಹಾಗೂ ತಾಂತ್ರಿಕ ಅನುಮೋದನೆಯ ನಂತರ ಸದರಿ ಸಾಮಗ್ರಿಗಳನ್ನು ಖರೀದಿಸಲು ಆಡಳಿತಾತ್ಮಕ ಹಾಗೂ ಆರ್ಥಿಕ ಮಂಜೂರಾತಿ ನೀಡಲು ಕೋರಿರುತ್ತಾರೆ. ಕಂಪ್ಯೂಟರ್ ಇತ್ಯಾದಿ ಸಾಮಗ್ರಿಗಳ ಖರೀದಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2030–03–001–2–04 Charges of Supply of Registered Documents, 051 General Expenses ಅಡಿಯಲ್ಲಿ 2008–09ನೇ ಸಾಲಿಗಾಗಿ ನೀಡಲಾಗಿರುವ ರೂ. 38 ಕೋಟಿ ಅನುದಾನದಡಿಯಲ್ಲಿ ಭರಿಸಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ: 19.11.2008ರ ನಡವಳಿಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಸಂಬಂಧಿಸಿದಂತೆ ಕಂಪ್ಯೂಟರ್ ಹಾಗೂ ಇತರೆ ಸಾಮಗ್ರಿಗಳನ್ನು ಖರೀದಿಸುವ ಕ್ರಿಯಾ ಯೋಜನೆಗೆ ಇ–ಆಡಳಿತ ಸಚಿವಾಲಯ ಈ ಕೆಳಗೆ ವಿವರಿಸಿರುವಂತೆ ಅನುಮೋದನೆ ನೀಡಿರುತ್ತದೆ.

**Decision:**

xxxx

1) Department of Stamps and Registration may take further action keeping in mind the relevant Government orders issued by e-Governance Secretariat from time to time.
2) As far as the above proposal is concerned the Department keeping in view of the Budget flow shall place the matter before the Departmental Technical Advisory Panel for its approval.

ಮೇಲೆ ಓದಲಾದ (3)ರ ದಿನಾಂಕ: 12.01.2009 ರಂದು ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಈ ಕೆಳಕಂಡಂತೆ ಕಂಪ್ಯೂಟರ್ ಹಾಗೂ ತತ್ಸಂಬಂಧಿತ ಸಾಮಗ್ರಿಗಳನ್ನು ಖರೀದಿಸಲು ಅನುಮೋದನೆ ನೀಡಲಾಗಿದೆ.

| Sl. No. | Name of the equipment | Nos. required |
|---|---|---|
| 1 | Desktop Computers | 300 |
| 2 | Laptops | 7 |
| 3 | Laser Printers | 7 |
| 4 | Dot Matrix Printers | 276 |
| 5 | 1 KVA UPS with 1 and 2 hours back up | 300 |
| 6 | Multimedia Projectors with Screen | 1 |
| 7 | Computer Tables | 300 |
| 8 | Computer Chairs | 300 |
| 9 | Antivirus Software-1+307 paper license | 307 |
| 10 | MS-Office Standard-1+307 paper license | 307 |

ಮೇಲ್ಕಂಡ ಸಾಮಗ್ರಿಗಳ ಪೈಕಿ ಕೇಂದ್ರ ಕಛೇರಿಗೆ ಬೇಕಾಗುವ ಕಂಪ್ಯೂಟರ್ ಟೇಬಲ್ ಮತ್ತು ಕುರ್ಚಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಹಾಗೂ ಉಪ ನೋಂದಣಿ ಮತ್ತು ಜಿಲ್ಲಾ ನೋಂದಣಿ ಕಛೇರಿಗಳಿಗೆ ಬೇಕಾಗುವ ಕಂಪ್ಯೂಟರ್ ಟೇಬಲ್ ಮತ್ತು ಕುರ್ಚಿಗಳನ್ನು ಆಯಾ ಜಿಲ್ಲಾ ನೋಂದಣಾಧಿಕಾರಿಗಳು ಸದರಿ ಸಾಮಗ್ರಿಗಳ ಪೂರೈಕೆದಾರರಿಂದ ದರ ಪಟ್ಟಿ ಪಡೆದು ಅತ್ಯಂತ ಕಡಿಮೆ ದರ ಪಟ್ಟಿಯನ್ನು ನೀಡುವ ಪೂರೈಕೆದಾರರಿಂದ ಖರೀದಿಸಲು ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (4)ರ ದಿನಾಂಕ: 21.02.2009 ರಂದು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗಾಗಿ ಪಡೆಯಲು ಉದ್ದೇಶಿಸಿದ ಇ–ಆಡಳಿತ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕುರಿತಂತೆ ಮೇಲೆ ಓದಲಾದ (5) ರ ದಿನಾಂಕ: 26.02.2009 ರಂದು ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಮೇಲ್ಕಂಡ ಸಾಮಗ್ರಿಗಳನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ವಿವಿಧ ಕಛೇರಿಗಳ ಉಪಯೋಗಕ್ಕಾಗಿ ಡಿಜಿಎಸ್&ಡಿ ದರಗಳನ್ವಯ ಖರೀದಿಸಲು ಅನುಮತಿ ನೀಡಲಾಗಿದೆ. ಈ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 322 ಮುನೋಮು 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 26.02.2009 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಈ ಕೆಳಗೆ ಕಾಣಿಸಿದ ಕಂಪ್ಯೂಟರ್ ಹಾಗೂ ತತ್ಸಂಬಧದ ಸಾಮಗ್ರಿಗಳನ್ನು ಡಿಜಿಎಸ್&ಡಿ ದರಗಳನ್ವಯ ಖರೀದಿಸಲು ಸರ್ಕಾರದ ಅನುಮೋದನೆ ನೀಡಿದೆ.

| Sl. No. | Name of the equipment | Numbers required |
|---|---|---|
| 1 | Desktop Computers | 300 |
| 2 | Laptops | 7 |
| 3 | Laser Printers | 7 |
| 4 | Dot Matrix Printers | 276 |
| 5 | 1 KVA UPS with 1 and 2 hours back up | 300 |
| 6 | Multimedia Projectors with Screen | 1 |
| 7 | Computer Tables | 300 |
| 8 | Computer Chairs | 300 |
| 9 | Antivirus Software-1+307 paper license | 307 |
| 10 | MS-Office Standard-1+307 paper license | 307 |

ಕಂಪ್ಯೂಟರ್ ಟೇಬಲ್ ಮತ್ತು ಕುರ್ಚಿಗಳನ್ನು ಸದರಿ ಸಾಮಗ್ರಿಗಳ ಪೂರೈಕೆದಾರರಿಂದ ದರಪಟ್ಟಿ ಪಡೆದು ಅತ್ಯಂತ ಕಡಿಮೆ ದರ ಸೂಚಿಸುವ ಪೂರೈಕೆದಾರರಿಂದ ಖರೀದಿಸಲು ಅನುಮತಿ ನೀಡಲಾಗಿದೆ.

ಮೇಲ್ಕಂಡ ಸಾಮಗ್ರಿಗಳನ್ನು ಖರೀದಿಸಲು ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 Charges of Supply of Registered Documents 051 General Expenses ಅಡಿಯಲ್ಲಿ 2008–2009 ನೇ ಸಾಲಿಗಾಗಿ ನೀಡಲಾಗಿರುವ ರೂ. 38 ಕೋಟಿ ಅನುದಾನದಡಿಯಲ್ಲಿ ಭರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 914

## KARNATAKA GOVERNMENT SECRETARIAT

## CORRIGENDUM No: ID 103 ITS 2008, Bangalore, Dated: 20th January 2009

In the preamble & order portion of the Government Order No:ID 103 ITS 2008, Bangalore Dated 6-11-08, the nomenclature of the proposal 'Development of malpe Port in Uttar Kannada District…' may be read & corrected as "Development of Malpe Port in Udupi District.."

By Order and in the name of the Governor of Karnataka,
**N. Ramesh**
Director, PPP Cell, IDD

P.R. 915

## COMMERCE AND INDUSTRIES SECRETARIAT

**Sub:** Project proposal of M/s. Hindustan Aeronautics Ltd., to establish unit for manufacture of "TPE 331 engine and Engine components, Ring Rolling, Fan Cases, Welded Structural Assemblies, Maintenance, Repair and Overhaul of Civil aircraft / engines and manufacture of Helicopters" at Aerospace SEZ, Devanahalli, Bangalore Rural District – Approval for – Orders reg.

**Read:** Proceedings of the 16th State High Level Clearance Committee (SHLCC) meeting held on 19.11.2008.

**Preamble:**

M/s. Hindustan Aeronautics Ltd., is a new company promoted by Fomento Group has proposed to establish unit for manufacture of "TPE 331 engine and Engine components, Ring Rolling, Fan Cases, Welded Structural Assemblies, Maintenance, Repair and Overhaul of Civil aircraft / engines and manufacture of helicopters" at Aerospace SEZ, Devanahalli, Bangalore Rural District with an investment of Rs. 2,095.00 Crores. Upon development, this Project is expected to provide employment to 1631 persons.

In the proposal submitted before the 16th State High Level Clearance Committee meeting (SHLCC) held on 19.11.2008, the Company had requested for various Infrastructure facilities as well as incentives and concessions as envisaged in the New Industrial Policy 2006-11 from the Government. The State High Level Clearance Committee, after detailed discussion of the project proposal of the said Company, vide the proceedings read above, has recommended for approval of the project, to provide infrastructural facilities and to extend incentives & concessions as envisaged in the Industrial Policy of the State Government 2006-11.

Government has examined the recommendations made by the State High Level Clearance Committee in its 16th Meeting held on 19.11.2008 in all aspects. Hence the following order.

**Government Order No. CI 7 SPI 2009, Bangalore, Dated: 10th February 2009**

In the circumstances explained above, Government is pleased to accord approval to M/s. Hindustan Aeronautics Ltd., to establish unit for manufacture of "TPE 331 engine and Engine components. Ring Rolling, Fan Cases, Welded Structural Assemblies, Maintenance, Repair and Overhaul of Civil aircraft / engines and manufacture of helicopters" at Aerospace SEZ, Devanahalli, Bangalore Rural District with an investment of Rs. 2,095.00 Crores and to provide employment to 1631 persons, with the following infrastructural facilities, incentives and concessions :

**INFRASTRUCTRE FACILITIES:**

**LAND:**

KIADB to acquire and allot 100 acres of land at Devanahalli, Bangalore Rural District.

**WATER:**

50,000 lpd to be supplied by KIADB and 50,000 lpd from recycling plant of BWSSB. Unit to minimize the usage of water an shall establish structure/facility for rainwater harvesting and groundwater recharge and also conduct an annual 'Water Audit '.

**POWER:**

5000 KVA to be serviced by BESCOM.

**INCENTIVES & CONCESSIONS:**

As per New Industrial Policy 2006-2011.

**ENVIRONMENT:**

KSPCB to issue CFE as per their norms. The company shall obtain environmental clearance from State. No works shall commence prior to obtaining ECC.

**EMPLOYMENT:**

Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**VENDOR DEVELOPMENT:**

Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**SOCIAL INFRASTRUCTURE DEVELOPMENT:**

The Company is advised to take up social infrastructure development projects in the vicinity of proposed location of the unit as per R&R policy 2007 (GoI). A copy of such projects shall be sent to the Government.

**OTHERS:**

The promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka

**APARNA PAVATE**

P.R. 916

Desk Officer (Technical Cell)

Commerce & Industries Department

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಹೆಚ್.ಪಿ.ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರನ್ನು ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ:** 1. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ : ಗಭೂಇ/ಆ.ಶಾ./ 2008–09, ದಿನಾಂಕ: 16.03.2009.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ.ಮಲ್ಲೇಶ್, ಹಿರಿಯ ಭೂವಿಜ್ಞಾನಿ (ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರು, ಹಗರಿ ನದಿಯಿಂದ ಅನಧಿಕೃತವಾಗಿ ಮರಳನ್ನು ತೆಗೆದು ಸಾಗಾಣಿಕೆ ಮಾಡುತ್ತಿದ್ದರೂ ಸಹ ಅದನ್ನು ತಡೆಗಟ್ಟಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲವೆಂದು ಮತ್ತು ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷ್ಯ ತೋರಿರುವುದರಿಂದ ಇವರನ್ನು ಅಮಾನತ್ತಿನಲ್ಲಿಡಲು ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1) ರ ಅ.ಸ. ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ಯರ್ರಿಸ್ವಾಮಿ ಯಲ್ಲಿ ಕಗ್ಗಲ್, ಬಳ್ಳಾರಿ ತಾಲ್ಲೂಕು, ಇವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ W.P.No.5429/2009 ರ ಕುರಿತು ಪ್ರಸ್ತಾವಿಸುತ್ತಾ, ಹಗರಿ ನದಿ ಪ್ರದೇಶದಲ್ಲಿ ಎಷ್ಟು ಜನರಿಗೆ ಮರಳು ಸಾಗಾಣಿಕೆಗೆ ಪರವಾನಗಿ ನೀಡಲಾಗಿದೆ ಮತ್ತು ನೀಡಿರುವ ಪರವಾನಗಿ ಕಾನೂನಿನ ರೀತ್ಯ ಸರಿಯಾಗಿದೆಯೇ? ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ, 1994 ಕ್ಕೆ ಅನುಗುಣವಾಗಿ ಮಂಜೂರಾತಿ ನೀಡಲಾಗಿದೆಯೇ, ಗುತ್ತಿಗೆ ನೀಡುವಲ್ಲಿ ವಿಧಿಸಲ್ಪಟ್ಟಿರುವ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಯಾಗಿರುತ್ತದೆಯೇ, ಉಲ್ಲಂಘನೆಯಾಗುವ ರೀತಿಯಲ್ಲಿ ಯಂತ್ರೋಪಕರಣಗಳನ್ನು ಬಳಸಿ ಮರಳು ಗಣಿಗಾರಿಕೆಯನ್ನು ಮಾಡಲಾಗಿದೆಯೇ, ಹಾಗಿದ್ದಲ್ಲಿ, ಇದನ್ನು ತಪ್ಪಿಸಲು ಯಾವ ತುರ್ತು ಕ್ರಮ ಕೈಗೊಳ್ಳಲಾಗಿದೆ ಕೈಗೊಳ್ಳಲು ಉದ್ದೇಶಿಸಲಾಗಿದೆ ಎಂಬ ವಿಷಯಗಳ ಕುರಿತು ವರದಿಯನ್ನು ಕಳುಹಿಸುವಂತೆ ಸೂಚಿಸಿದ್ದರೂ ಸಹ ಶ್ರೀ ಹೆಚ್.ಪಿ.ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರು ಯಾವುದೇ ಕ್ರಮಕೈಗೊಂಡಿರುವುದಿಲ್ಲ. ಅಲ್ಲದೇ, ಯಂತ್ರೋಪಕರಣಗಳನ್ನು ಬಳಸಿ ಮರಳು ಗಣಿಗಾರಿಕೆಯನ್ನು ಮಾಡುತ್ತಿದ್ದರೂ ಸಹ ಅಂತಹವರ ಮೇಲೆ ನಿಯಮಾನುಸಾರ ಯಾವುದೇ ಕ್ರಮಕೈಗೊಂಡಿರುವುದಿಲ್ಲವೆಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ(1)ರ ಅ.ಸ. ಪತ್ರದಲ್ಲಿ ತಿಳಿಸಿರುತ್ತಾರೆ.

ಹಗರಿ ನದಿ ಪ್ರದೇಶದಿಂದ ಮರಳು ಸಾಗಾಣಿಕೆಗಾಗಿ ಸರ್ಕಾರದಿಂದ ಯಾವುದೇ ಅಧಿಕೃತ ಪರವಾನಗಿ ನೀಡಿರುವುದಿಲ್ಲವೆಂದೂ ಮತ್ತು ಹಗರಿ ಸೇತುವೆಯಿಂದ 1 ಕಿ.ಮೀ. ಸುತ್ತಳತೆಯಲ್ಲಿ ಮರಳು ತೆಗೆಯುವುದು, ಕುಂಶಿ ಮಾಡುವುದು ನಿಷೇದಿಸಿದ್ದರೂ ಸಹ ಕಾನೂನು ಬಾಹಿರವಾಗಿ ಮರಳನ್ನು ತುಂಬಿ ಸಾಗಾಣಿಕೆ ಮಾಡುತ್ತಿರುವುದು ಕಂಡುಬಂದಿದ್ದು, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರು, ನಿಯಮಾನುಸಾರ ಕ್ರಮಕೈಗೊಂಡಿರುವುದಿಲ್ಲವೆಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ(1)ರ ಅ.ಸ.ಪತ್ರದಲ್ಲಿ ತಿಳಿಸಿರುತ್ತಾರೆ.

ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಿ:13–03.09 ರಂದು W.P.No.5429/2009 ರ ವಿಚಾರಣೆಯ ಸಂದರ್ಭದಲ್ಲಿ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರು, ಹಗರಿ ನದಿಯಲ್ಲಿ ಅಕ್ರಮವಾಗಿ ನಡೆಯುತ್ತಿರುವ ಮರಳು ಗಣಿಗಾರಿಕೆಯನ್ನು ಸ್ಥಗಿತಗೊಳಿಸಲಾಗಿದೆ ಎಂದು ತಪ್ಪು ಮಾಹಿತಿಯನ್ನು ನೀಡಿದಾಗ, ದಿನಾಂಕ 11.03.09 ರಂದು ಸದರಿ ಪ್ರದೇಶದಲ್ಲಿ ನಿಯಮಬಾಹಿರವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿ, 1 ಮೀ. ಗಿಂತ ಹೆಚ್ಚಿನ ಆಳದವರೆಗೆ ಮರಳನ್ನು ತೆಗೆಯಲು ಬೃಹತ್ ಯಂತ್ರೋಪಕರಣಗಳನ್ನು ಬಳಸಿ, ಆಕ್ರಮವಾಗಿ ಮರಳನ್ನು ತೆಗೆಯುತ್ತಿರುವ ದೃಶ್ಯಗಳುಳ್ಳ D.V.D. ಯನ್ನು ಫಿರ್ಯಾದುದಾರರ ಪರ ವಕೀಲರು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಇದನ್ನು ವೀಕ್ಷಿಸಿರುವ ಮಾನ್ಯ ನ್ಯಾಯಾಲಯವು ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಕೂಡಲೇ ಕ್ರಮವಹಿಸಿ ಒಂದು ವಾರದ ಅವಧಿಯೊಳಗೆ ಅನುಸರಣಾ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸುವಂತೆ ಆದೇಶಿಸಿರುತ್ತದೆ.

ಅಂತೆಯೇ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರು, ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿಸಿ, ಮಾನ್ಯ ನ್ಯಾಯಾಲಯಕ್ಕೆ ತಪ್ಪು ಮಾಹಿತಿಯನ್ನು ಒದಗಿಸಿ, ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿಯಿರಿಸಿ, ಇವರನ್ನು ಅಮಾನತ್ತಿನಲ್ಲಿಡಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ.25.ಎಂಜಿಎಸ್.2009, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯ ಭೂವಿಜ್ಞಾನಿ(ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ) ರ ಪ್ರಕಾರ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಪಿ. ಮಲ್ಲೇಶ್, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತಾರೆ.

ಅಮಾನತ್ತಿನ ಅವಧೆಯಲ್ಲಿ ಶ್ರೀ ಹೆಚ್.ಪಿ. ಮಲ್ಲೇಶ್, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 917 **ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಕಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ ಡಿ.ಪಿ.ಎ.ಆರ್.548 ಎಸ್.ಎ.ಎಸ್ 08 ದಿನಾಂಕ 31.01.09

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 31.01.09ರ ಸಿ.ಆ.ಸು.ಇ. ಅಧಿಸೂಚನೆಯಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಕೆಳದರ್ಜೆಗಿಳಿಸಿ ಶ್ರೀ ಎ.ಕೆ. ಮೊನ್ನಪ್ಪ, ಭಾ.ಆ.ಸೇ.ರವರನ್ನು ನೇಮಿಸಲಾಗಿದ್ದು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಐ.ಎ.ಎಸ್. ವೇತನ ಶ್ರೇಣಿ 15600–39100+pay grade 7600ಕ್ಕೆ ಕೆಳದರ್ಜೆಗಿಳಿಸಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 50 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಮೇರೆಗೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಈ ಹುದ್ದೆಯನ್ನು ತಾತ್ಕಾಲಿಕವಾಗಿ ಶ್ರೀ ಎ.ಕೆ. ಮೊನ್ನಪ್ಪ ಭಾ.ಆ.ಸೇ. ಇವರು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುವವರೆಗೆ ಸದರಿ ಹುದ್ದೆಯನ್ನು ಐ.ಎ.ಎಸ್. ವೇತನ ಶ್ರೇಣಿ 15600 – 39100 +pay grade 7600ರ ಕೆಳದರ್ಜೆಗಿಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 918 **ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು ಇವರ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು ರೇಷ್ಮೆ ಗೂಡು ಮಾರುಕಟ್ಟೆ, ಮಾಗಡಿ ತಾಲ್ಲೂಕು, ಇವರ ಪತ್ರ ದಿನಾಂಕ 05.01.2007
2. ರೇಷ್ಮೆ ಆಯುಕ್ತರ ಪತ್ರ ಸಂ: ಸಿಬ್ಬಂದಿ(7ಎ): ಕಾನಿವ: ಪ್ರಪರಾ:37:05–06 ದಿನಾಂಕ 07.11.2008

ಪ್ರಸ್ತಾವನೆ:

ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು ಇವರು ತಮ್ಮ 2004–05ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿನ ಪ್ರತಿಕೂಲ ಷರಾದ ವಿರುದ್ಧ ಸರ್ಕಾರಕ್ಕೆ ರೇಷ್ಮೆ ಆಯುಕ್ತರ ಮೂಲಕ ಮೇಲೆ ಓದಲಾದ ಉಲ್ಲೇಖ (1) ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ವರದಿ ಪ್ರಾಧಿಕಾರದ ಎಲ್ಲಾ ಷರಾಗಳು ಸತ್ಯಕ್ಕೆ ದೂರವಾಗಿದ್ದು, ಆಧಾರ ರಹಿತವಾಗಿರುತ್ತವೆಂದು, ಈ ಎಲ್ಲಾ ಷರಾಗಳನ್ನು ಕೈಬಿಡಬೇಕೆಂದು, ವರದಿ ಪ್ರಾಧಿಕಾರ ದಾಖಲಿಸಿರುವ ದೋಷಪೂರಿತ ಹಾಗೂ ಕಾನೂನಿಗೆ ಸಮ್ಮತವಲ್ಲದ ವರದಿಯನ್ನು ತಿರಸ್ಕರಿಸುವಂತೆ ಕೋರಿರುತ್ತಾರೆ. ಸದರಿ ಮೇಲ್ಮನವಿಯನ್ನು ನಿಯಮಾನುಸಾರ ಪರಿಶೀಲಿಸಿ ಮನವಿಯಲ್ಲಿ ಹೇಳಿರುವ ಅಂಶಗಳ ಕುರಿತಂತೆ ರೇಷ್ಮೆ ಆಯುಕ್ತರ ಅಭಿಪ್ರಾಯವನ್ನು ಕೋರಲಾಗಿ ರೇಷ್ಮೆ ಆಯುಕ್ತರು ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ, ಶ್ರೀ ರಾಮಚಂದ್ರ ಇವರು ಹಣ ದುರುಪಯೋಗಪಡಿಸಿಕೊಂಡಿರುವ ಬಗ್ಗೆ ರೇಷ್ಮೆ ಉಪ ನಿರ್ದೇಶಕರು, ರಾಮನಗರ ಇವರಿಂದ ವರದಿ ಪಡೆದಿರುವ ಬಗ್ಗೆ ತಿಳಿಸಿ ಸದರಿ ವರದಿಯಲ್ಲಿ ರೈತರಿಗಾಗಲೀ, ರೀಲರುಗಳಿಗಾಗಲೀ ಯಾವುದೇ ಬಾಕಿ ಕೊಡಬೇಕಾಗಿಲ್ಲವೆಂದು ತಿಳಿಸಿರುವ ಅಂಶವನ್ನು ಗಣನೆಗೆ ತೆಗೆದುಕೊಂಡು ಈ ಪ್ರಕರಣದಲ್ಲಿ ಯಾವುದೇ ಸರ್ಕಾರದ ಹಣ ದುರುಪಯೋಗವಾಗಿರುವುದಿಲ್ಲವಾದ್ದರಿಂದ ಪ್ರತಿಕೂಲ ಷರಾವನ್ನು ಸಲಹಾತ್ಮಕ ಷರಾ ಎಂದು ಪರಿಗಣಿಸಬಹುದೆಂದು ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಆದರೆ ಸದರಿ ವಾರ್ಷಿಕ ವರದಿಯನ್ನು ಅವಗಾಹಿಸಿದಾಗ ವರದಿಯ ಭಾಗ–3ರ ಕಾಲಂ 2, 3–ಎ, ಬಿ, ಎಫ್, ಜಿ, ಹೆಚ್, ಜೆ, ಕಾಲಂ–4, 9 ಮತ್ತು 10ರಲ್ಲಿ ಸಂಪೂರ್ಣವಾಗಿ ಪ್ರತಿಕೂಲ ಷರಾವನ್ನು ವರದಿ ಪ್ರಾಧಿಕಾರವು ನಮೂದಿಸಿದ್ದು ವಿವರಗಳು ಕೆಳಗಿನಂತಿವೆ :

| | ಅಂಶ | ವರದಿ ಪ್ರಾಧಿಕಾರದ ಷರಾ |
|---|---|---|
| 3 | (ಎ) ಕೆಲಸದ ಬಗ್ಗೆ ಮನೋಭಾವ | ಸಾಧಾರಣಕ್ಕಿಂತ ಕಡಿಮೆ, ಅಸಡ್ಡೆ, ಪ್ರತಿಕೂಲ ಷರಾ |
| | (ಬಿ) ಜವಾಬ್ದಾರಿ ವಹಿಸಿಕೊಳ್ಳುವ ಇಚ್ಛೆ | ಸಾಧಾರಣಕ್ಕಿಂತ ಕಡಿಮೆ, ಪ್ರತಿಕೂಲ ಷರಾ |
| | (ಎಫ್) ತೀರ್ಮಾನ ತೆಗೆದುಕೊಳ್ಳುವ ಸಾಮರ್ಥ್ಯ | ಇಲ್ಲ. ಪ್ರತಿಕೂಲ ಷರಾ |
| | (ಜಿ) ನಿರೂಪಣಾ ನೈಪುಣ್ಯತೆ | ಸಾಧಾರಣಕ್ಕಿಂತ ಕಡಿಮೆ. ಪ್ರತಿಕೂಲ ಷರಾ |
| | (ಹೆಚ್) ಪರಸ್ಪರ ವೈಯುಕ್ತಿಕ ಸಂಬಂಭಗಳು, ಪ್ರೇರೇಪಣಾ ಸಾಮರ್ಥ್ಯ ಮತ್ತು ತಂಡದ ಕೆಲಸ | ಸಾಧಾರಣಕ್ಕಿಂತ ಕಡಿಮೆ. ಪ್ರತಿಕೂಲ ಷರಾ |
| | (ಜೆ) ಸಾರ್ವಜನಿಕರೊಂದಿಗೆ ಸಂಬಂಧ | ಉತ್ತಮ ಇಲ್ಲ. ಪ್ರತಿಕೂಲ ಷರಾ |
| 4 | ನಿಷ್ಠೆ | ಇಲ್ಲ ನಂಬಿಕೆದ್ರೋಹ ಬಗೆಯುವವರು. ನಗದು ಶಾಯಲ್ಲಿ ರೂ. ಅಂದಾಜು 5,10,486 ಪ್ರಭಾರ ಹಸ್ತಾಂತರಿಸಿರುವುದಿಲ್ಲ |
| 9 | ಸಾಮಾನ್ಯ ಮೌಲ್ಯಮಾಪನ | ಉತ್ತಮಕ್ಕಿಂತ ಕಡಿಮೆ. ಪ್ರತಿಕೂಲ ಷರಾ |

ಶ್ರೀ ರಾಮಚಂದ್ರ ಇವರ 2004–05ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿ ವರದಿ ಮಾಡುವ ಪ್ರಾಧಿಕಾರವು ಮೇಲಿನ 8 ಅಂಶಗಳಲ್ಲಿ ಪ್ರತಿಕೂಲ ಷರಾವನ್ನು ದಾಖಲಿಸಿದ್ದು ವರದಿಯ ಕೊನೆಯಲ್ಲಿ ಶ್ರೇಣಿಯನ್ನು ನೀಡುವಾಗ "ಸಾಧಾರಣಕ್ಕಿಂತ ಕಡಿಮೆ, ವಿಚಾರಣೆ ಆಧಾರದ ಮೇಲೆ ಇದು ಪ್ರತಿಕೂಲ ಷರಾ ಎಂದು ಪರಿಗಣಿಸಿದೆ" ಎಂಬುದಾಗಿ ಸ್ಪಷ್ಟವಾಗಿ ನಮೂದಿಸಿರುತ್ತಾರೆ. ವರದಿ ಪ್ರಾಧಿಕಾರದ ಈ ಷರಾಗಳನ್ನು ಪುನರಾವಲೋಕನ ಪ್ರಾಧಿಕಾರವು ಒಪ್ಪಿರುವುದಲ್ಲದೆ ಅಂಗೀಕಾರ ಪ್ರಾಧಿಕಾರವಾದ ಆಗಿನ ರೇಷ್ಮೆ ಆಯುಕ್ತರು ಅಂಗೀಕರಿಸಿರುತ್ತಾರೆ. ಇದಲ್ಲದೆ, ಶ್ರೀ ರಾಮಚಂದ್ರ ಇವರು ದಿನಾಂಕ 4.04.2006 ರಂದು ರೇಷ್ಮೆ ಆಯುಕ್ತರಿಗೆ ಮನವಿ ಸಲ್ಲಿಸಿ ಪ್ರತಿಕೂಲ ಷರಾಗಳನ್ನು ಕೈಬಿಡುವಂತೆ ಕೋರಿರುವ ಮನವಿಯ ಮೇಲೆ ವರದಿ ಪ್ರಾಧಿಕಾರದಿಂದ ಅಭಿಪ್ರಾಯವನ್ನು ನೀಡುವಂತೆ ಕೋರಲಾಗಿ ವರದಿ ಪ್ರಾಧಿಕಾರಿಯಾದ ಶ್ರೀ ಧನಂಜಯ ನಾಯ್ಕ, ಅಂದಿನ ರೇಷ್ಮೆ ಕೃಷಿ ಉಪ ನಿರ್ದೇಶಕರು, ಬಿಳಿ ದೇವಾಲಯ ಇವರು ಶ್ರೀ ರಾಮಚಂದ್ರ ಇವರ ಮನವಿಯ ಮೇಲೆ ಕಂಡಿಕೆವಾರು ಉತ್ತರಗಳನ್ನು ನೀಡಿ ಸದರಿ ನೌಕರರ ಮೇಲ್ಮನವಿಯ ಹೇಳಿಕೆಗಳು ಸತ್ಯಕ್ಕೆ ದೂರವಾಗಿದ್ದು ಆಧಾರರಹಿತವಾಗಿರುತ್ತವೆಂದು, ಕರ್ತವ್ಯದಲ್ಲಿ ಲೋಪವೆಸಗಿದ್ದಾರೆಂದು, ರೇಷ್ಮೆ ಬೆಳೆಗಾರರ ಹಾಗೂ ನೂಲು ಬಿಚ್ಚುವವರ ಹಣವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆಂದು, ಮೇಲಾಧಿಕಾರಿಗಳ ಸೂಚನೆಗಳನ್ನು ಪಾಲಿಸದೆ ಉದಾಸೀನತೆ ತೋರಿದ್ದಾರೆಂದು ತಿಳಿಸಿ ವರದಿಯಲ್ಲಿನ ಷರಾಗಳನ್ನು ಪ್ರತಿಕೂಲ ಷರಾಗಳೆಂದೇ ಪರಿಗಣಿಸಬೇಕೆಂದು ಸ್ಪಷ್ಟವಾಗಿ ಅಭಿಪ್ರಾಯಪಟ್ಟಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 21 ರೇಇವಿ 2007, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು, ಇವರ 2004–05ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿನ ಪ್ರತಿಕೂಲ ಷರಾಗಳು ಗಂಭೀರ ಸ್ವರೂಪದವುಗಳಾಗಿದ್ದು ಇವುಗಳನ್ನು ವರದಿ ಮಾಡುವ ಪ್ರಾಧಿಕಾರವು ಪುನಃ ಸಮರ್ಥಿಸಿಕೊಂಡಿದ್ದು ಇದರಿಂದ ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು, ಸರ್ಕಾರಿ ಸೇವೆಯಲ್ಲಿ ಸರ್ಕಾರಿ ನೌಕರರ ಕರ್ತವ್ಯಕ್ಕೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ದೃಡಪಟ್ಟಿರುವುದರಲ್ಲಿ ಸಂದೇಹವೇ ಇಲ್ಲದಿರುವುದರಿಂದ ಸದರಿ ಪ್ರತಿಕೂಲ ಷರಾಗಳನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಸಲಹಾತ್ಮಕ ಷರಾ ಎಂದು ಪರಿಗಣಿಸುವಂತೆ ರೇಷ್ಮೆ ಆಯುಕ್ತರು ಮಾಡಿರುವ ಶಿಫಾರಸ್ಸನ್ನು ಒಪ್ಪದೇ ಶ್ರೀ ರಾಮಚಂದ್ರ, ರೇಷ್ಮೆ ಪ್ರದರ್ಶಕರು, ಇವರ

2004–05ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿನ ಪ್ರತಿಕೂಲ ಷರಾಗಳನ್ನು 'ಪ್ರತಿಕೂಲ ಷರಾ' ಎಂದೇ ಸರ್ಕಾರವು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 919

**ಭಾರತಿ ಆರ್ ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

**ವಿಷಯ:** ಮೆ. ನಿರಾಣಿ ಶುಗರ್ಸ್ (ಲಿ), ಮುಧೋಳ, ಬಾಗಲಕೋಟೆ ಜಿಲ್ಲೆ ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಯಿಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಐ 187 ಎಎಸ್‌ಜಿಎಫ್ 07 ದಿನಾಂಕ 11.9.2007.
2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಡಿಇವಿ/64/2006–07 ದಿನಾಂಕ: 27.08.2007 ಮತ್ತು 01.12.2008.

**ಪ್ರಸ್ತಾವನೆ:**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ನಿರಾಣಿ ಶುಗರ್ಸ್ (ಲಿ), ಮುಧೋಳ, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಇಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1) ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿ ಅನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 270 ಎಸ್‌ಜಿಎಫ್ 07, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಮೆ. ನಿರಾಣಿ ಶುಗರ್ಸ್ (ಲಿ), ಮುಧೋಳ, ಬಾಗಲಕೋಟೆ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 5000 ಟಿಸಿಡಿ ಇಂದ 10000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಹೆಚ್ಚುವರಿಯಗಿ ಬೇಕಾಗುವ ಕಬ್ಬನ್ನು ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳಬೇಕೆಂದು, ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ಹಾಗೂ ಗೌ.ಉಚ್ಚನ್ಯಾಯಾಲಯದಲ್ಲಿ ಬಾಕಿಯಿರುವ ರಿಟ್ ಅರ್ಜಿ ಸಂಖ್ಯೆ 8492/2008ರಲ್ಲಿ ಹೊರ ಬರುವ ತೀರ್ಪಿಗೆ ಒಳಪಟ್ಟ ಷರತ್ತನ್ನು ವಿಧಿಸಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 920

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತ ಕೈಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** 2008–09 ಸಾಲಿನ ಆರ್ಥಿಕ ಸಾಲಿಗೆ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರ ಇವರಿಗೆ ನಿಗಧಿಪಡಿಸಿರುವ ಅನುದಾನ ರೂ.7.63 ಲಕ್ಷವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 144 ಕೆಎಂಯು 2003 ದಿನಾಂಕ 23–8–2005.
2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 239 ಕೆಎಂಯು 2005 ದಿನಾಂಕ 27–6–2006.
3. ಹಣಕಾಸು ಅಧಿಕಾರಿ ಕುವೆಂಪು ವಿಶ್ವವಿದ್ಯಾನಿಲಯ ಇವರ ಪತ್ರದ ಸಂಖ್ಯೆ ಕು.ವಿ.:ಆರ್ಥಿಕ/14/1307/2008–09 ದಿನಾಂಕ 04–12–2008.
4. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ. ಅವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ: 1:53:2008–09 ದಿನಾಂಕ: 07–1–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ, ಕೆಳದಿ ಸಾಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ ಇದನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ವಿಲೀನಗೊಳಿಸಿದೆ ಮತ್ತು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಮುಂದಿನ ಹತ್ತು ವರ್ಷಗಳಿಗೆ ಪ್ರತಿ ವರ್ಷ ರೂ. 7.63 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿರುತ್ತದೆ. ಕುವೆಂಪು ವಿಶ್ವವಿದ್ಯಾಲಯವು ಕೆಳದಿ ವಸ್ತು ಸಂಗ್ರಹಾಲಯವನ್ನು ಸಿಬ್ಬಂದಿ ಸಹಿತ ದಿನಾಂಕ 23–8–2005ರಿಂದ ಜಾರಿಗೆ ಬರುವಂತೆ ಅದರ ಆಡಳಿತ ವ್ಯಾಪ್ತಿಗೆ ಸೇರಿಸಿಕೊಂಡಿದ್ದು ವಸ್ತು ಸಂಗ್ರಹಾಲಯದ ವಾರ್ಷಿಕ ನಿರ್ವಹಣೆ ಮತ್ತು ಸಿಬ್ಬಂದಿ ವೇತನಗಳಿಗಾಗಿ 2008–09ನೇ ಸಾಲಿನಲ್ಲಿ ಹಣ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 04.12.2008 ರ ಪತ್ರದಲ್ಲಿ ಹಣಕಾಸು ಅಧಿಕಾರಿ ಕುವೆಂಪು ವಿಶ್ವವಿದ್ಯಾನಿಲಯ ಅವರು, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರನ್ನು ಕೋರಿರುತ್ತಾರೆ. ಮೇಲಿನ

ಹಿನ್ನಲೆಯಲ್ಲಿ ಕೆಳದಿ ವಸ್ತು ಸಂಗ್ರಹಾಲಯಕ್ಕೆ 2008–09ನೇ ಸಾಲಿನಲ್ಲಿ ಒಂದೇ ಕಂತಿನಲ್ಲಿ ರೂ.7.63 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಉಲ್ಲೇಖ (4)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 17 ಕೆಎಂಯು 2009, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಸಂಸ್ಥೆ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇದರ ವಾರ್ಷಿಕ ನಿರ್ವಹಣೆ ಹಾಗೂ ಸಿಬ್ಬಂದಿ ವೇತನಗಳಿಗಾಗಿ 2008–2009ನೇ ಸಾಲಿಗೆ ಒಟ್ಟು ರೂ.7.63 ಲಕ್ಷ (ಏಳು ಲಕ್ಷ ಅರವತ್ತೂರು ಸಾವಿರ ಮಾತ್ರ)ಗಳನ್ನು ಕುವೆಂಪು ವಿಶ್ವವಿದ್ಯಾನಿಲಯ, ಶಿವಮೊಗ್ಗ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
2) ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3) ಕಾರ್ಯ ಚಟುವಟಿಕೆಗಳ ಬಗ್ಗೆ ಅನುಪಾಲನಾ ವರದಿ ಸಲ್ಲಿಸುವುದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ)–101–ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಇಡಿ 369 ಐಎಫ್ (ಬಿಎ)2009 ದಿನಾಂಕ: 10–2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್**
ಪಿ.ಆರ್ 928 ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ)

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಮತ್ತು ಕಂಪ್ಯೂಟರ್ ಪೀಠೋಪಕರಣಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರ ಪತ್ರ ಸಂಖ್ಯೆ: ಕಸನಿ 34 ಕಅ 2008–09 ದಿನಾಂಕ 23.07.2008.
2. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 194 ಕಸನಿ 2007 ದಿನಾಂಕ 19.03.2008.
3. ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 05.02.2009 ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನ.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ 19.03.2008 ರ ಆದೇಶದಲ್ಲಿ ಇಲಾಖೆಯ 20 ಜಿಲ್ಲೆಗಳ ಅಧೀನ ಕಛೇರಿಗಳಿಗೆ ತಲಾ 50,000 ದಂತೆ ಕಂಪ್ಯೂಟರ್ ಮತ್ತು ಅದಕ್ಕೆ ಸಂಬಂಧಪಟ್ಟ ಇತರೆ ಪರಿಕರಗಳನ್ನು ಖರೀದಿಸಲು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆಯೆಂದು, ಸದರಿ ಮೊತ್ತವನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೀದರ್, ರಾಯಚೂರು, ಗುಲಬರ್ಗಾ, ಕೊಪ್ಪಳ, ಬಾಗಲಕೋಟೆ, ಬಳ್ಳಾರಿ, ಮಡಿಕೇರಿ, ಹಾವೇರಿ, ತುಮಕೂರು, ಕೋಲಾರ, ದಾವಣಗೆರೆ, ಮಂಗಳೂರು, ಚಾಮರಾಜನಗರ, ಬಿಜಾಪುರ, ಗದಗ, ಚಿಕ್ಕಮಗಳೂರು, ಶಿವಮೊಗ್ಗ, ಹಾಸನ, ಕಾರವಾರ, ಬೆಳಗಾಂ ಜಿಲ್ಲೆಗಳಿಗೆ ಸರಬರಾಜು ಮಾಡಿ ಅಳವಡಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ. ಪ್ರಸಕ್ತ ಸಾಲಿನಲ್ಲಿ (2008–09) ಉಳಿದ 9 ಜಿಲ್ಲೆಗಳ ಜಿಲ್ಲಾ ಸಹಾಯಕ ನಿರ್ದೇಶಕರು – ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ, ಚಿಕ್ಕಬಳ್ಳಾಪುರ, ಮೈಸೂರು, ಚಿತ್ರದುರ್ಗ, ಉಡುಪಿ, ಮಂಡ್ಯ, ಧಾರವಾಡ– ಕಚೇರಿಗಳಿಗೆ ಹಾಗೂ ಕೇಂದ್ರ ಕಛೇರಿಗೆ 1 ಗಣಕಯಂತ್ರ ಮತ್ತು ಇತರೆ ಪರಿಕರಗಳನ್ನು ತಲಾ ರೂ. 50,000/– ಗಳಂತೆ ಖರೀದಿಸಲು ಒಟ್ಟು ರೂ.5.00 ಲಕ್ಷಗಳ ಹಣವನ್ನು ಬಿಡುಗಡೆ ಮಾಡಬೇಕೆಂದು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ 5.02.2009 ರಂದು ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ ಅವರ ಅಧ್ಯಕ್ಷತೆಯಲ್ಲಿ ನಡೆದ ಸಲಹಾ ಸಮಿತಿ (TAP) ಯಲ್ಲಿ ಸೂಕ್ತವಾದ ಕ್ರಿಯಾಯೋಜನೆಯನ್ನು ಇ–ಆಡಳಿತದವರಿಂದ ಅನುಮೋದಿಸಿಕೊಂಡು ಹಾಗೂ ಇ–ಆಡಳಿತ ಇಲಾಖೆ ಶಾರ್ಟ್‌ಲಿಸ್ಟ್ ಮಾಡಿರುವ ಪಟ್ಟಿಯಲ್ಲಿ ಕನಿಷ್ಟ 3

ಸಂಸ್ಥೆಗಳಿಂದ/ಕಂಪನಿಗಳಿಂದ ದರಗಳನ್ನು ತರಿಸಿ ತುಲನೆ ಮಾಡಿ ಅತ್ಯಂತ ಕಡಿಮೆ ದರ ಸೂಚಿಸಿರುವ ಕಂಪನಿಗಳಿಂದ ಖರೀದಿಸಲು ಅನುಮತಿ ನೀಡಲಾಯಿತು.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 130 ಕಸನಿ 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಬಾಕಿ ಇರುವ 9 ಜಿಲ್ಲೆಗಳ ಅಧೀನ ಕಛೇರಿಗಳಿಗೆ 9 ಕಂಪ್ಯೂಟರ್ ಹಾಗೂ ಕೇಂದ್ರ ಕಛೇರಿಗೆ 1 ಕಂಪ್ಯೂಟರ್ ಮತ್ತು ಅವುಗಳಿಗೆ ಸಂಬಂಧಪಟ್ಟಂತೆ ಪ್ರಿಂಟರ್, ಯು.ಪಿ.ಎಸ್. ಸಾಫ್ಟ್‌ವೇರ್ ಮತ್ತು ಕಂಪ್ಯೂಟರ್ ಪೀಠೋಪಕರಣಗಳನ್ನು ಖರೀದಿಸಲು ರೂ 5.00 ಲಕ್ಷಗಳನ್ನು (ರೂಪಾಯಿ ಐದು ಲಕ್ಷಗಳು ಮಾತ್ರ) ಇ–ಆಡಳಿತ ಇಲಾಖೆಯಿಂದ ಕ್ರಿಯಾಯೋಜನೆಗೆ ಸಹಮತಿಯನ್ನು ಪಡೆಯಬೇಕೆಂಬ ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ನಿಯಮ 1999 ಮತ್ತು ನಿಯಮಗಳು 2000 ನ್ನು ಅನುಸರಿಸಬೇಕೆಂಬ ಷರತ್ತಿಗೆ ಒಳಪಟ್ಟು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 05.02.2009 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ (TAP) ತೀರ್ಮಾನದಂತೆ ನಿಗದಿಪಡಿಸಿದ Configuration ಇರುವ ಕಂಪ್ಯೂಟರ್ ಹಾಗೂ ಇತರೆ ಪರಿಕರಗಳನ್ನು ಖರೀದಿಸತಕ್ಕದ್ದು ಹಾಗೂ ಈ ವೆಚ್ಚವನ್ನು 2008–09ನೇ ಸಾಲಿನ ಅಯವ್ಯಯ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 07.03.2009ರಲ್ಲಿ ಟಿಪ್ಪಣಿ ಸಂಖ್ಯೆ ಇಡಿ 706 ಐಎಫ್ಎ (ಬಿ&ಎ) 2009 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಪಡೆದು ಮತ್ತು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10.07.1996 ರಲ್ಲಿ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 929 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1)ಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 92 ಬೆಂರೂಪ್ರಾ 2007 ದಿನಾಂಕ 11.03.2008.

2) ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ನಯೋಬಿ/ಸನಿ/ಚಿತ್ರದುರ್ಗ/ಚ.ಕೆರೆ/ಮ.ಯೋಪ/08–09 ದಿನಾಂಕ: 18.09.08.

3) ನಗರ ಯೋಜನಾ ನಿರ್ದೇಶಕರ ಕಾರ್ಯಾಲಯದ ಏಕ ಕಡತ ಸಂಖ್ಯೆ:ನಯೋ(13): ಜಂನಿ(ಬೆಂವಿ) ಮಯೋ(ಪ್ರ–1)/ಅಂತಿಮ/474/2008–09 ದಿನಾಂಕ: 19.01.2009 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಚಳ್ಳಕೆರೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಇವರು ಚಳ್ಳಕೆರೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಶಿಫಾರಸ್ಸಿನೊಂದಿಗೆ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3) ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಚಳ್ಳಕೆರೆ ಪಟ್ಟಣದ ಜನಸಂಖ್ಯೆಯು 2021ರಲ್ಲಿ 1,25,000 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾಯೋಜನೆ (ಪರಿಷ್ಕೃತ–1) ಯನ್ನು ರೂಪಿಲಾಗಿದೆ. ಚಳ್ಳಕೆರೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 3216 ಹೆಕ್ಟೇರ್ ಪ್ರದೇಶದಲ್ಲಿ 1348.65 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಗೆ (ಪರಿಷ್ಕೃತ–1) ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಪ್ರಕರಣ(9) ರಿಂದ (12)ರಲ್ಲಿನ ಅಂಶಗಳನ್ನು ಪರಿಗಣಿಸಿ, ಚಳ್ಳಕೆರೆ ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ 1348.65 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 667.82 ಹೆಕ್ಟೇರ್ (ಶೇಕಡ 49.74), ವಾಣಿಜ್ಯಕ್ಕಾಗಿ 52.19 ಹೆಕ್ಟೇರ್ (ಶೇಕಡ 3.86), ಕೈಗಾರಿಕೆಗಾಗಿ 174.54 ಹೆಕ್ಟೇರ್ (ಶೇಕಡ 13.00), ಸಾರ್ವಜನಿಕ : ಅರೆ ಸಾರ್ವಜನಿಕ ವಲಯಕ್ಕೆ 81.47 ಹೆಕ್ಟೇರ್ (ಶೇಕಡ 6.07), ಉದ್ಯಾನವನ : ಬಯಲು ಜಾಗೆಗಳಿಗೆ 128.89 ಹೆಕ್ಟೇರ್ (ಶೇಕಡ 9.60), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 237.78 ಹೆಕ್ಟೇರ್ (ಶೇಕಡ 17.70) ಮತ್ತು ಜಲಾವೃತ್ತ ಪ್ರದೇಶಕ್ಕಾಗಿ 5.96 ಹೆಕ್ಟೇರ್ ಪ್ರದೇಶವನ್ನು ಒಳಗೊಂಡಿರುತ್ತದೆ. ಮಹಾಯೋಜನೆಗೆ (ಪರಿಷ್ಕೃತ–1) ಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು

ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 45 ಬೆಂಮಪ್ರಾ 2009, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಳ್ಳಕೆರೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಕಲಂ 13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1) ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 930

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಹನುಮೇಗೌಡ, ಪಿ.ಸಿ., ಅಶೋಕನಗರ, ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(5)14/2007–08 ದಿ:02–05–2008.
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ:27–08–2008.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)14/2007–08 ದಿನಾಂಕ:17–12–2008.

**ಪ್ರಸ್ತಾವನೆ:**

ಶ್ರೀ ಸಿ.ಹನುಮೇಗೌಡ, ಪಿ.ಸಿ., ಅಶೋಕನಗರ, ಪೊಲೀಸ್ ಠಾಣೆ, ಬೆಂಗಳೂರು, ಇವರು ಈ ಹಿಂದೆ ಮಡಿವಾಳ ಪೊಲೀಸ್ ಠಾಣೆಯಲ್ಲಿ ರೈಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದರು ಎಂಬ ಕಾರಣಕ್ಕಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:–**

"ಶ್ರೀ ಸಿ.ಹನುಮೇಗೌಡ, ಪಿ.ಸಿ.–7536, ಹಾಲಿ ಅಶೋಕ ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಹಿಂದೆ 1977 ರಿಂದ ಜೂನ್ 2003ರ ವರೆಗೆ ಮಡಿವಾಳ ಪೊಲೀಸ್ ಠಾಣೆಯಲ್ಲಿ ಠಾಣೆಯ ಸಹಾಯಕ ಬರಹಗಾರನಾಗಿ ಕರ್ತವ್ಯ ನಿರ್ವಹಿಸಿದ್ದು, ನಿಮಗೆ ಪೊಲೀಸ್ ಕಮೀಷನರ್ ರವರ ಕಛೇರಿಯಿಂದ ಬಂದ ಪಾಸ್‌ಪೋರ್ಟ್ ವೆರಿಫಿಕೇಷನ್ ಅರ್ಜಿ ಸಂಖ್ಯೆ:ಎಂವಿ 5664/02 ಎ–27405/02ನ್ನು ದಿ:20–10–2002ರ ನಂತರ ವೆರಿಫಿಕೇಷನ್ ಬಗ್ಗೆ ನೀಡಿದ್ದು, ನೀವು ಸದರಿ ಪಾಸ್‌ಪೋರ್ಟ್ ಅರ್ಜಿದಾರರ ವಾಸದ ಬಗ್ಗೆ ಹಾಗೂ ಪಾಸ್‌ಪೋರ್ಟ್ ಅರ್ಜಿಯಲ್ಲಿ ನಮೂದಿಸಿರುವ ನೆರೆಹೊರೆಯವರನ್ನು ವಿಚಾರಣೆ ನಡೆಸಿ ಅವರುಗಳ ಹೇಳಿಕೆ ಪಡೆಯಬೇಕಾಗಿದ್ದರೂ ಸಹ ಯಾವುದೋ ಆಮಿಷಕ್ಕೊಳಗಾಗಿ ಅರ್ಜಿದಾರರನ್ನು ಸ್ವತ: ನೋಡದೇ ಠಾಣೆಗೆ ಬರುವಂತೆ ತಿಳಿಸಿ ಬಂದಿರುತ್ತೀರಿ. ಹಾಗೂ ಠಾಣೆಯ ಪಿ.ಐ. ರವರು ಪಾಸ್‌ಪೋರ್ಟ್ ವೆರಿಫಿಕೇಷನ್ ಅರ್ಜಿಗೆ ಸಹಿ ಮಾಡುವ ಮುಂಚೆ ಅರ್ಜಿದಾರರು ನೀಡಿರುವ ವಿಳಾಸದಲ್ಲಿ ಸಿಗದ ಬಗ್ಗೆ ಹಾಗೂ ನೆರೆಹೊರೆಯವರ ವಿಚಾರಣೆ ನಡೆಸದ ಬಗ್ಗೆ ತಿಳಿಸದೇ ನಿಮ್ಮ ಮೇಲಾಧಿಕಾರಿಗೆ ಸರಿಯಾದ ಮಾಹಿತಿ ನೀಡದೇ ಅರ್ಜಿದಾರರ ನಕಲು ದಾಖಲಾತಿಗಳ ಮೇರೆಗೆ ಅಕ್ರಮವಾಗಿ ಪಾಸ್‌ಪೋರ್ಟ್ ಪಡೆಯಲು ಅವಕಾಶ ಮಾಡಿಕೊಟ್ಟು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಹಾಗೂ ಬೇಜವಾಬ್ದಾರಿತನವನ್ನು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:02–05–2008ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿ, ದಿ:11–07–07 ರಿಂದ 23–11–07ರ ವರೆಗೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವ ದಂಡನೆಯನ್ನು ವಿಧಿಸಿರುತ್ತಾರೆ."

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 344 ಪೊಸಿಅ 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಹನುಮೇಗೌಡ, ಪಿ.ಸಿ., ಅಶೋಕನಗರ, ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 951

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಶಿಕ್ಷಣ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಇಡಿ 193 ಯೋಯೋಕ 2008, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**.

**ವಿಷಯ:** ಶಿಕ್ಷಣ ಇಲಾಖೆಯ ಉನ್ನತ ಶಿಕ್ಷಣ ವಲಯದಡಿ ಬರುವ ಕಾಲೇಜು ಶಿಕ್ಷಣ ಇಲಾಖೆಯಡಿ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ ಹೊರಡಿಸಿದ ತಿದ್ದುಪಡಿ ಆದೇಶಕ್ಕೆ ತಡೆ ಹಿಡಿಯುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಸಕ 2008, ದಿನಾಂಕ: 02–03–2009 (ಎರಡು ಆದೇಶಗಳು)

2. ಮುಖ್ಯ ಚುನಾವಣಾಧಿಕಾರಿಯವರ ಪತ್ರ ಸಂಖ್ಯೆ: ಸಿಆಸುಇ 25 ಜಮುಚುಅ 2009, ದಿನಾಂಕ: 16.03.2009.

ಮೇಲೆ (1)ರಲ್ಲಿ ಓದಲಾಗಿರುವ ಎರಡು ತಿದ್ದುಪಡಿ ಆದೇಶಗಳಲ್ಲಿ ಒಟ್ಟು ಏಳು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಸ್ಥಳಾಂತರಗೊಳಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ರಾಜ್ಯ ಮುಖ್ಯ ಚುನಾವಣಾಧಿಕಾರಿಯವರು ಸದರಿ ಎರಡು ಆದೇಶಗಳನ್ನು ಲೋಕಸಭಾ ಚುನಾವಣೆಗಳು ಮುಗಿಯುವವರೆಗೆ ತಡೆ ಹಿಡಿಯಲು ಸೂಚಿಸಿರುತ್ತಾರೆ.

ಆದ್ದರಿಂದ ಉನ್ನತ ಶಿಕ್ಷಣ ಇಲಾಖೆಯಡಿ ಬರುವ ಏಳು ಸರ್ಕಾರಿ ಪ್ರಥಮ, ದರ್ಜೆ ಕಾಲೇಜುಗಳನ್ನು ಆರಂಭಿಸುವ ಬಗ್ಗೆ ಹೊರಡಿಸಲಾಗಿದ್ದ ಎರಡು ತಿದ್ದುಪಡಿ ಆದೇಶಗಳನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ತಡೆಹಿಡಿಯಲಾಗಿದೆ. ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಕಾಲೇಜು ಶಿಕ್ಷಣ ಆಯುಕ್ತರಿಗೆ ಸೂಚಿಸಲಾಗಿದೆ.

**ಐ.ಎಫ್. ಮಾಗಿ**

ಪಿ.ಆರ್. 952

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಯೋಜನೆ).

**ವಿಷಯ:** ಸರ್ಕಾರಿ ಶಾಲೆಗಳ ಗ್ರಂಥಾಲಯಕ್ಕಾಗಿ ಪುಸ್ತಕಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:** ಸನ್ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಟಿಪ್ಪಣಿ ಪತ್ರ ಸಂಖ್ಯೆ: ಪ್ರಾ.ಪ್ರೌ.ಶಿ.ಸ./3253/09, ದಿನಾಂಕ: 24.02.2009.

**ಪ್ರಸ್ತಾವನೆ:**

1. ಮೇಲೆ ಓದಲಾದ ಪತ್ರದಲ್ಲಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಸರ್ಕಾರಿ ಶಾಲೆಗಳ ಗ್ರಂಥಾಲಯಕ್ಕಾಗಿ ಪುಸ್ತಕಗಳನ್ನು ಖರೀದಿಸುವ ಬಗ್ಗೆ 2008–09ನೇ ಸಾಲಿನ ಆಯವ್ಯಯದಲ್ಲಿ 50,000/– ರೂ.ಗಳನ್ನು ಒದಗಿಸಲಾಗಿದ್ದು, ರಾಜ್ಯದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಸಂಖ್ಯೆ ಸುಮಾರು 25,000ಕ್ಕೂ ಹೆಚ್ಚಿದ್ದು, ಸರಾಸರಿ ಒಂದು ಶಾಲೆಗೆ ರೂ. 20/– ಅನುದಾನ ಒದಗಿಸಿದಂತಾಗುತ್ತದೆ. ಇದು ಅತ್ಯಂತ ಕಡಿಮೆ ಆಗುವುದರಿಂದ ಶಿಕ್ಷಣ ಇಲಾಖೆಯಲ್ಲಿ ಖರ್ಚಾಗದೇ ಉಳಿದಿರುವ ಇನ್ನಿತರೇ ಯಾವುದೇ ಅನುದಾನದಲ್ಲಿ ಹೆಚ್ಚುವರಿಯಾಗಿ ರೂ. 50.00 ಲಕ್ಷಗಳನ್ನು ಪುಸ್ತಕ ಖರೀದಿಗಾಗಿ ಬಿಡುಗಡೆ ಮಾಡಲು ಅಗತ್ಯ ಕ್ರಮ ಕೈಗೊಳ್ಳುವಂತೆ ಆದೇಶಿಸಿರುತ್ತಾರೆ.

2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 206 ಯೋಯೋಕ 2008, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

**[ಇಡಿ 42 ಸ್ಕೀಮರ(ಯುನಿಕ್)2009, ದಿನಾಂಕ: 16ನೇ ಮಾರ್ಚ್ 2009]**

3. ಸರ್ಕಾರಿ ಶಾಲೆಗಳ ಗ್ರಂಥಾಲಯಕ್ಕಾಗಿ ಪುಸ್ತಕಗಳನ್ನು ಖರೀದಿಸಲು, 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2202–01–800–1–13–059 (ಯೋಜನೆ)ಯಡಿ ಹೆಚ್ಚುವರಿಯಾಗಿ 10.00 ಲಕ್ಷ ರೂಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ 2202–01–800–1–35–059(ಯೋಜನೆ)ಯಡಿ ಉಳಿತಾಯವಾಗುವ ಮೊತ್ತದಿಂದ ಮರುಹೊಂದಾಣಿಕೆ ಮಾಡಿ ಬಿಡುಗಡೆ ಮಾಡಲಾಗಿದೆ. ಸದರಿ ಮೊತ್ತವನ್ನು ಉದ್ದೇಶಿತ ಕಾರ್ಯಕ್ರಮಕ್ಕಾಗಿ ಬಳಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಸರ್ಕಾರವು ಅನುಮತಿಸಿದೆ.

4. ಈ ಆದೇಶವನ್ನು ದಿನಾಂಕ : 16.03.2009, ಸಂಖ್ಯೆ: ಶಿಇ 855 ಐಎಫ್ (ಬಿಎ) 2009ರ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

## FORM 22A
## (Article 309)

**Re-appropriation Statement to accompany all applications for sanction to expenditure not provided for the budget, or for additional allotment**

(Rs. in lakhs)

| Major, Minr, Sub-and Detailed Heads of Budget (The same details must be given as in the printed Budget Estimate) | Heads of estimate proposed to be increased | | | | Heads of estimate proposed to be reduced | | | | Remarks: (Here state fully the reasons for allotment and for anticipating savings. |
|---|---|---|---|---|---|---|---|---|---|
| | Amount as in the sanctioned Budget estimate 2008-09 | Actual expenditure up-to-date viz. | Probable expenditure during remainder of the year 2008-09 | Amount of Additional allotment required 2008-09 | Amount as in the sanctioned estimate 2008-09 | Actual expenditure up-to-date viz. | Probable expenditure during remainder of the year 2008-09 | Amount available for re-appropriation 2008-09 | |
| 1 | 2 | 3 | 4 | 5 | 6 | 7 | 8 | 9 | 10 |
| 2202-01-800-1-13-059 (P) | 600.00 | 550.00 | 60.00 | 10.00 | | | | | ಸರ್ಕಾರಿ ಶಾಲೆಗಳಲ್ಲಿ ಸಗಟಿನಲ್ಲಿ ಅವಶ್ಯಕ ಪುಸ್ತಕಗಳನ್ನು ಖರೀದಿಸಿ ಸರಬರಾಜು ಮಾಡಲು ಆಯವ್ಯಯದ ಕೊರತೆ ಇರುವುದರಿಂದ ಹೆಚ್ಚುವರಿ ಪ್ರಸ್ತಾಪಿಸಲಾಗಿದೆ. |
| 2202-01-800-1-35-059 (P) | - | - | - | - | 9090.59<br>-4811.05*<br>------------<br>4279.54<br>-39.62**<br>------------<br>4239.92 | 367.54 | 3862.38 | 10.00 | ನಲಿ ಕಲಿ ಕಾರ್ಯಕ್ರಮದ ಅನುಷ್ಠಾನದ ಸಂಬಂಧ ಆದೇಶ ಹೊರಡಿಸುವಲ್ಲಿ ವಿಳಂಬವಾಗಿರುವುದರಿಂದ ಉಳಿತಾಯ ಸಂಭವಿಸಲಿದೆ. |

*reappropriated to ZPS vide Order No : ED 340 BRS 2008 dt: 27.08.2008.

**Rs.39.62 lakhs has already been proposed for reappropriation under this head of account.

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ).

ಪಿ.ಆರ್. 953

**ವಿಷಯ:** ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ, ಈ ಕಛೇರಿಗೆ 2008–09ನೇ ಸಾಲಿನಲ್ಲಿ ಮುಂದುವರೆದ ಕಾರ್ಯಕ್ರಮದಡಿ ನೀಡಿರುವ ಯೋಜನಾ ಆಯವ್ಯಯದಲ್ಲಿ ಮರುಹೊಂದಾಣಿಕೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 78 ಯೋಯೋಕ 2008, ಬೆಂಗಳೂರು, ದಿನಾಂಕ 04–04–2008.

2. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಇವರ ಪತ್ರ ಸಂಖ್ಯೆ: 2: ಯೋಜನಾ ಆಯವ್ಯಯ 15 2008–09, ದಿನಾಂಕ 05–02–2009.

**ಪ್ರಸ್ತಾವನೆ:**

1. ಮೇಲೆ ಓದಲಾದ (1)ರ ಪತ್ರದಲ್ಲಿ 2008–09ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–02–001–0–05–049 (ಯೋಜನೆ) ಅಡಿ ಪ್ರಯಾಣ ವೆಚ್ಚಕ್ಕಾಗಿ 5.00ಲಕ್ಷ ರೂಗಳನ್ನು ಒದಗಿಸಲಾಗಿತ್ತು.

2. ಮೇಲೆ ಓದಲಾದ (2)ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗರವರು ಸಿಬ್ಬಂದಿ ವರ್ಗದವರ ಡಿಸೆಂಬರ್ 2008 ರಿಂದ ಫೆಬ್ರುವರಿ 2009ರವರೆಗಿನ ಪ್ರಯಾಣ ಭತ್ಯೆ ಬಿಲ್ಲುಗಳನ್ನು ಪಾವತಿಸಲು ಅನುದಾನದ ಕೊರತೆ ಇರುವುದರಿಂದ ಸದರಿ ಬಾಬ್ತಿಗೆ ಹೆಚ್ಚುವರಿಯಾಗಿ 2.00ಲಕ್ಷ ರೂಗಳನ್ನು ಅದೇ ಲೆಕ್ಕ ಶೀರ್ಷಿಕೆಯ 2202–02–001–0–05–051(ಯೋಜನೆ) ಅಡಿಯಲ್ಲಿ ಉಳಿತಾಯವಾಗುವ ಮೊತ್ತದಿಂದ ಭರಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 41 ಯೋಯೋಕ 2009, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

[**ಇಡಿ 41 ಸ್ಕೀಮರ(ಯುನಿಕ್)2009, ದಿನಾಂಕ: 16ನೇ ಮಾರ್ಚ್ 2009**]

3. 2008–09ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–02–001–0–05–051(ಯೋಜನೆ) ಅಡಿ ಉಳಿತಾಯವಾಗುವ ಅನುದಾನದಿಂದ 2.00 ಲಕ್ಷ ರೂ (ಎರಡು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಪ್ರಯಾಣ ವೆಚ್ಚಗಳಿಗಾಗಿ ಲೆಕ್ಕ ಶೀರ್ಷಿಕೆ 2202–02–001–0–05–041(ಯೋಜನೆ) ಅಡಿಯಲ್ಲಿ ಮರುಹೊಂದಾಣಿಕೆ ಮಾಡಿ ಬಿಡುಗಡೆ ಮಾಡಲಾಗಿದೆ. ಸದರಿ ವೆಚ್ಚ ಭರಿಸಲು ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಇವರಿಗೆ ಅನುಮತಿ ನೀಡಲಾಗಿದೆ.

4. ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 561 ಐಎಫ್(ಬಿ&ಎ) 2009, ದಿನಾಂಕ 28–02–2009ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 954

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2009ರ ಮಾರ್ಚ್ ಅಂತ್ಯದ 17ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 22 ಪಿಆರ್ಎಂ 2002 ದಿನಾಂಕ 6–3–03,

(2) ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್‌ರವರ ಪತ್ರ ಸಂ:KBITS/ACT/97/2002-03, ದಿನಾಂಕ: 20.1.2009 ಮತ್ತು 12–02–2009.

(3) ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂ & ಜೈತಂನಿ/ ಲೆಕ್ಕ–1/58 ಹುಡ್ಕೋ ಸಾಲ/768/2004–05, ದಿ:23–1–2009 ಮತ್ತು 12–02–2009.

**ಪ್ರಸ್ತಾವನೆ:**

ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ [Housing and Urban Development Corporation] ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಯ ಬಾಬ್ತು ಅವರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2008–09ನೇ ಸಾಲಿನ ಆಯವ್ಯಯದ ಪರಿಷ್ಕೃತ ಅಂದಾಜಿನಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಲೆಕ್ಕಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ರೂ. 837.14 ಲಕ್ಷಗಳನ್ನು ಒದಗಿಸಲಾಗಿದ್ದು, ಇದರಲ್ಲಿ ಇಲ್ಲಿಯವರೆಗೆ ರೂ.271,72,139/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ [3]ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರಗಳು ಮತ್ತು [2]ರಲ್ಲಿ ಓದಲಾದ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಪತ್ರಗಳಲ್ಲಿ 2008–09ನೇ ಆಯವ್ಯಯದ ಪರಿಷ್ಕೃತ ಪೂರ್ವ ಅಂದಾಜಿನಲ್ಲಿ ಲೆಕ್ಕಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ರೂ. 1137.14 ಲಕ್ಷಗಳ ಅನುದಾನವನ್ನು ಉಲ್ಲೇಖಿಸಿ ಉಳಿದಿರುವ ಶಿಲ್ಕು ರೂ. 8,65,41,861/– ಎಂದು, ಗ್ಯಾರಂಟಿ ಕಮಿಷನ್ ಸೇರಿ ಹೆಚ್ಚುವರಿಯಾಗಿ ಬೇಕಾಗುವ ಅನುದಾನ ರೂ. 2,69,19,143/– ಎಂದು ಹಾಗೂ ಹುಡ್ಕೋ ಸಾಲದ ಅಂತಿಮ ತೀರುವಳಿಗಾಗಿ ಬೇಕಾಗುವ ಮೊತ್ತ ರೂ. 11,34,61,004/– ಎಂದು ತಿಳಿಸುತ್ತಾ ರೂ. 2,69,19,143/– ಹೆಚ್ಚಿನ ಅನುದಾನದೊಂದಿಗೆ ಉಳಿದಿರುವ ಶಿಲ್ಕು ರೂ. 8,65,41,861/– ಗಳನ್ನು ಉಪಯೋಗಿಸಿಕೊಂಡು ಹುಡ್ಕೋ ಸಾಲದ ಅಂತಿಮ ತೀರುವಳಿ ಮಾಡಲು ಕೆಬಿಟ್ಸ್ ಸಂಸ್ಥೆಗೆ ಅನುಮತಿ ನೀಡಲು ಪ್ರಸ್ತಾವಿಸಲಾಗಿತ್ತು. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಬಿಟ್ಸ್ ಸಂಸ್ಥೆಯು ಹುಡ್ಕೋದಿಂದ ಪಡೆದ ಸಾಲದಲ್ಲಿ ಪಾವತಿಸಲು ಬಾಕಿ ಇರುವ 2008–09ನೇ ಸಾಲಿನ 4ನೇ ಕಂತಿನ ಸಾಲದ ಬಾಬ್ತು ಅಸಲು ಮತ್ತು ಬಡ್ಡಿ ಸೇರಿ ರೂ. 86,47,698/– ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 03 ಪಿಆರ್‌ಎಂ 2008, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**.

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 31–3–2009ರ ಅಂತ್ಯದ 17ನೇ ತ್ರೈಮಾಸಿಕ ಕಂತಿನ ಹಣ ರೂ. 86,47,698/–ಗಳ [ಎಂಬತ್ತಾರು ಲಕ್ಷದ ನಲವತ್ತೇಳು ಸಾವಿರದ ಆರನೂರಾ ತೊಂಬತ್ತೆಂಟು ರೂಪಾಯಿಗಳು ಮಾತ್ರ] ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 66 ವೆಚ್ಚ 2/2009, ದಿನಾಂಕ 17–3–2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 957

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹುಡ್ಕೋದಿಂದ ಪಡೆದ ಸಾಲಕ್ಕೆ 2009ನೇ ಮಾರ್ಚ್‌ಗೆ ತ್ರೈಮಾಸಿಕ ಅಸಲು ಮತ್ತು ಬಡ್ಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ. ಕೆಆರ್‌ಡಿಸಿಎಲ್/ಎಫ್‌ಡಿ/ಎಂ.ಡಿ./2008–09/330 ದಿನಾಂಕ 07–02–2009.

**ಪ್ರಸ್ತಾವನೆ:**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಳ್ಳುತ್ತಿರುವ ಯೋಜನೆಗಳಿಗಾಗಿ ವಿವಿಧ ಸ್ಕೀಂಗಳ ಅಡಿಯಲ್ಲಿ ಹುಡ್ಕೋದಿಂದ ಪಡೆದ ಸಾಲವು ಈವರೆಗೆ ಒಟ್ಟು 5090672000.00ರೂ.ಗಳು ದಿನಾಂಕ 31–03–2009ರ ಅಂತ್ಯಕ್ಕೆ ಬಾಕಿ ಇರುತ್ತದೆ. ಓದಲಾದ ದಿನಾಂಕ 07–02–2009ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, 2009ನೇ ಮಾರ್ಚ್‌ಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಮೇಲಿನ ಸಾಲದ ಮರುಪಾವತಿಗೆ ಅಸಲು ಹಾಗೂ ಬಡ್ಡಿ ಸೇರಿ ಅನುಕ್ರಮವಾಗಿ 14,14,99,000.00/–ರೂ.ಗಳು ಮತ್ತು 8,32,63,688.00ರೂ.ಗಳು ಒಟ್ಟು ರೂ.22,47,62,688.00/–ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದೆಯೆಂದು ವರದಿ ಮಾಡಲಾಗಿದೆ. ದಿನಾಂಕ 24–02–2009ರ ಸರ್ಕಾರಿ ಅದೇಶದಲ್ಲಿ ಅಸಲು

ಹಾಗೂ ಬಡ್ಡಿ ಮೊತ್ತವಾದ 10,14,05,260.00/–ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಈಗ ಬಾಕಿ ಇರುವ ಮೊತ್ತ ರೂ.22,47,62,688.00/–ಗಳನ್ನು ಬಿಡುಗಡೆ ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಲೋಇ 11 ಇಎಪಿ 2009 ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009.**

ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬತ್ತಿಗೆ 2009ನೇ ಮಾರ್ಚ್‌ಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಅಸಲು ಹಾಗೂ ಬಡ್ಡಿ ಸೇರಿ ಒಟ್ಟು ರೂ.22,47,62,688.00/–ಗಳನ್ನು (ಇಪ್ಪತ್ತೆರಡು ಕೋಟಿ ನಲವತ್ತೇಳು ಲಕ್ಷದ ಅರವತ್ತೆರಡು ಸಾವಿರದ ಆರುನೂರ ಎಂಬತ್ತೆಂಟು ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ **"5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ"** ರ ಅಡಿಯಲ್ಲಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಲೋಇ 238 ಆಕೋ–1/09 ದಿನಾಂಕ 12–03–2009ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೇವಿಪ್ರಸಾದ್**
ಪಿ.ಆರ್. 958 ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**ವಿಷಯ:** ಹಾವೇರಿ ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ–4ರ ಉಳಿಕೆ ಭಾಗ (Abandoned Road) ತೋಟದ ಯಲ್ಲಾಪೂರ ಬೈಪಾಸ್‌ದಿಂದ ದೇವಗಿರಿ–ಯಲ್ಲಾಪೂರ ಬೈಪಾಸ್ ಕೂಡು ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: ಸಿಬಿಎನ್/ಹೈಆಸೆ/ಕ.ಸಂ.7/ಎನ್‌ಹೆಚ್–4/ಉಭಾಅ/08–09/12342, ದಿನಾಂಕ: 24–1–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ರಾಷ್ಟ್ರೀಯ ಹೆದ್ದಾರಿ–4ರ ಉಳಿಕೆ ಭಾಗ (Abandoned Road) ತೋಟದ ಯಲ್ಲಾಪೂರ ಬೈಪಾಸ್‌ದಿಂದ ದೇವಗಿರಿ–ಯಲ್ಲಾಪೂರ ಬೈಪಾಸ್ ರಸ್ತೆಗೆ ಕೂಡು ರಸ್ತೆಯನ್ನು ಅಭಿವೃದ್ಧಿಪಡಿಸಲು 2008–09ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–ಇ ಭಾಗ–2ರ ಹಾವೇರಿ ಮತಕ್ಷೇತ್ರದ ಅ.ಸಂ.2ರಲ್ಲಿ ರೂ.500.00 ಲಕ್ಷಗಳ ಅಂದಾಜು ಮೊತ್ತದೊಂದಿಗೆ ಸೇರ್ಪಡೆಗೊಂಡಿರುತ್ತದೆ. ಆದ್ದರಿಂದ, **ಹಾವೇರಿ ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ–4ರ ಉಳಿಕೆ ಭಾಗ (Abandoned Road) ತೋಟದ ಯಲ್ಲಾಪೂರ ಬೈಪಾಸ್‌ದಿಂದ ದೇವಗಿರಿ–ಯಲ್ಲಾಪೂರ ಬೈಪಾಸ್ ರಸ್ತೆ ಕಿ.ಮೀ. 0.00 ರಿಂದ 8.69 ವರೆಗಿನ** ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸುವುದು ಅವಶ್ಯವಾಗಿದೆ ಎಂದು ವರದಿ ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 221 ಸಿಆರ್‌ಎಂ 2009, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ, **ಹಾವೇರಿ ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ–4ರ ಉಳಿಕೆ ಭಾಗ (Abandoned Road) ತೋಟದ ಯಲ್ಲಾಪೂರ ಬೈಪಾಸ್‌ದಿಂದ ದೇವಗಿರಿ–ಯಲ್ಲಾಪೂರ ಬೈಪಾಸ್ ರಸ್ತೆ ಕಿ.ಮೀ. 0.00 ರಿಂದ 8.69ವರೆಗಿನ** ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ರೇವಣ್ಣ**
ಪಿ.ಆರ್. 959 ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಕಾಮಗಾರಿಯ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯ ವೆಚ್ಚವನ್ನು ಭರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ.ಲೋಇ/64/ಇಎಪಿ/2008 ಬೆಂಗಳೂರು ದಿನಾಂಕ 3.11.2008 ಮತ್ತು 26.11.2008.

ಮೇಲೆ ಓದಲಾದ ಆದೇಶ (1) ರಲ್ಲಿ ಕಾಮಗಾರಿಗಳ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯನ್ನು ರಚಿಸಿ, ಸದರಿ ಕಾರ್ಯಪಡೆಗೆ ಉಲ್ಲೇಖ ನಿಬಂಧನೆಗಳನ್ನು ನಿಗಧಿಪಡಿಸಲಾಗಿದೆ.

ಸದರಿ ಕಾರ್ಯಪಡೆಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಸಭೆಗಳಿಗೆ ಹಾಜರಾಗಲು / ಸ್ಥಳತನಿಖೆಗೆ ಹೋಗಿ ಬರಲು ಅವಶ್ಯವಾದ ಭತ್ಯಗಳನ್ನು ಒದಗಿಸಬೇಕಾಗಿರುತ್ತದೆ. ಈ ವೆಚ್ಚಗಳಿಗಾಗಿ ಪೂರಕ ಅಂದಾಜಿನಲ್ಲಿ ರೂ.25.00 ಲಕ್ಷಗಳನ್ನು ಒದಗಿಸಲಾಗಿದ್ದು ಸದರಿ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ಕಾರ್ಯಪಡೆಯ ವೆಚ್ಚಕ್ಕಾಗಿ ಭರಿಸಲು ತಿರ್ಮಾನಿಸಲಾಗಿದೆ. ಆದ್ದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 64 ಇಎಪಿ 2008, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಕರ್ನಾಟಕ ರಾಜ್ಯದ ಕಾಮಗಾರಿಯ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯ ವೆಚ್ಚಕ್ಕಾಗಿ ಪೂರಕ ಅಂದಾಜಿನಲ್ಲಿ (ಡಿಮ್ಯಾಂಡ್–20) ಲೆಕ್ಕ ಶೀರ್ಷಿಕೆ 2059–80–001–0–04–051– ಸಾಮಾನ್ಯ ವೆಚ್ಚ (ಯೋಜನೇತರ) ಅಡಿಯಲ್ಲಿ ರೂ.25.00 ಲಕ್ಷಗಳನ್ನು (ರೂ.ಇಪ್ಪತ್ತೈದು ಲಕ್ಷಗಳು ಮಾತ್ರ) ಒದಗಿಸಲಾಗಿದ್ದು, ಈ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ಭರಿಸುವಂತೆ ಸರ್ಕಾರವು ಆದೇಶಿಸಿ, ಸದರಿ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು ನಿಗಮವು ರೂ.25.00 ಲಕ್ಷಗಳ (ರೂ.ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ 17(ಸಿ)4 ರಲ್ಲಿನಂತೆ ಮಹಾಲೇಖಪಾಲರು (ಎ ಅಂಡ್ ಇ) ಇವರಿಂದ ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಅಲ್ಲದೆ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಆ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ 87 ಅಕೋ–2/2009. ದಿನಾಂಕ 2.2.2009ರಲ್ಲಿನ ಸಹಮತಿಯುನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 960

**ವಿಷಯ:** 2008–09ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ನಿಗದಿಪಡಿಸಲಾಗಿರುವ ಬಂಡವಾಳ ವೆಚ್ಚದಡಿಯಲ್ಲಿ ಬಾಕಿ ಇರುವ ಅನುದಾನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ. ಲೋಇ/28/ಇಎಪಿ/2008 ದಿನಾಂಕ 13–02–2009.
2. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕ.ರ.ಅ.ನಿ.ನಿ./ವ್ಯ.ನಿ./2008–09/3355 ದಿನಾಂಕ 20–02–2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ, 2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸರ್ಕಾರದಿಂದ ಬಂಡವಾಳ ವೆಚ್ಚದಡಿಯಲ್ಲಿ ನಿಗದಿಪಡಿಸಲಾಗಿದ್ದ ರೂ.325.00 ಕೋಟಿ ರೂ.ಗಳಲ್ಲಿ ಇದುವರೆಗೆ 290.20 ಕೋಟಿ ರೂ.ಗಳನ್ನು ಬಿಡುಗಡೆ ಮಾಡಿದ್ದು, ದಿನಾಂಕ 13–02–2009ರ ಆದೇಶದಲ್ಲಿ ರೂ.30.00 ಕೋಟಿ ರೂ.ಗಳನ್ನು ಲೆಕ್ಕಶೀರ್ಷಿಕೆ "5054–80–190–0–01–132 ಬಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಪಾವತಿಸಲು ಸರ್ಕಾರಿ ಅದೇಶವನ್ನು ಹೊರಡಿಸಲಾಗಿದೆ.

ಓದಲಾದ (2) ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, ಈಗಾಗಲೇ ನಿಗಮದಿಂದ ಕೈಗೊಳ್ಳಲಾಗಿದ್ದು ಪ್ರಗತಿಯಲ್ಲಿರುವ ಕಾಮಗಾರಿಗಳ ಬಿಲ್ಲುಗಳ ಪಾವತಿಗಾಗಿ ಮೇಲಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಬಾಕಿ ಉಳಿದಿರುವ ರೂ.34.80 ಕೋಟಿಗಳ ಮೊತ್ತವನ್ನು ನಿಗಮಕ್ಕೆ ಬಿಡುಗಡೆ ಮಾಡುವಂತೆ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 28 ಇಎಪಿ 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 34.80 ಕೋಟಿ ರೂ.ಗಳನ್ನು(ಮೂವತ್ತು ನಾಲ್ಕು ಕೋಟಿ ಎಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–132 (ಯೋಜನೆ)" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 34.80 ಕೋಟಿ ರೂ.ಗಳು (ಮೂವತ್ತ ನಾಲ್ಕು ಕೋಟಿ ಎಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ.17/(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸಿ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕಕದ್ದು.

ಆ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ. ಲೋಇ/23/ ಅಕೋ–1/2009. ದಿನಾಂಕ: 16.03.2009 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಪಿ.ಆರ್. 961 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಸ್.ಸುನಂದ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಪಾಂಡವಪುರ, ಮಂಡ್ಯ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಡಿಪಿಜಿ/ಮೈವಿ/41/2004–05 ದಿನಾಂಕ: 29–04–2005 ಮತ್ತು 11/02/2009.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ:ಎಸ್.ಸುನಂದ, ಇವರು ದಿನಾಂಕ 23–02–2002 ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು ದಿನಾಂಕ: 16/08/2004 ರಿಂದ 25/11/2004ರ ವರೆಗೆ ಸಂಯುಕ್ತ ರಜೆಗಾಗಿ ಅರ್ಜಿ ಸಲ್ಲಿಸಿ ಅನಧಿಕೃತ ಗೈರುಹಾಜರಾಗಿರುವ ಕಾರಣ, ಇಲಾಖಾ ವಿಚಾರಣೆಯನ್ನು ಆಯುಕ್ತರ ಮಟ್ಟದಲ್ಲಿ ನಡೆಸಿ, ದಿನಾಂಕ 18/02/2005 ರಂದು ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿದೆ. ತದನಂತರ ದಿನಾಂಕ 17/03/2005 ರಂದು ಸದರಿ ವೈದ್ಯಾಧಿಕಾರಿಯು ತಮ್ಮ ಹುದ್ದೆಗೆ ರಾಜೀನಾಮೆಯನ್ನು ಸಲ್ಲಿಸಿ ಅಂಗೀಕರಿಸಲು ಕೋರಿರುವುದಾಗಿ ತಿಳಿಸಿ, ಸರ್ಕಾರದ ಮಟ್ಟದಲ್ಲಿ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 689 ಹೆಚ್ಎಸ್ಹೆಚ್ 2008, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಡಾ:ಎಸ್.ಸುನಂದ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ ಪಾಂಡವಪುರ, ಮಂಡ್ಯ ಜಿಲ್ಲೆ, ಇವರು ದಿನಾಂಕ 16–08–2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977 ರ ನಿಯಮ 6ರ ಅಡಿಯಲ್ಲಿ ದಿನಾಂಕ 16–08–2004 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 962 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

## ಕಂದಾಯ ಸಚಿವಾಲಯ

**ವಿಷಯ:** ಗದಗ ಜಿಲ್ಲಾ ನೂತನ ಆಡಳಿತ ಭವನದಲ್ಲಿ ಜಿಲ್ಲಾ ನೊಂದಣಿ ಕಛೇರಿಗೆ ಹಂಚಿಕೆ ಮಾಡಲಾಗಿದ್ದು, ಪೀಠೋಪಕರಣ ಮತ್ತು ಮುಂತಾದ ಅಗತ್ಯ ಕಾಮಗಾರಿಗಳನ್ನು ಮಾಡಿಸಲು ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 23/96–67, ದಿನಾಂಕ: 27.12.2008 / 01.01.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:27.12.2008 / 01.01.2009 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಗದಗ ಜಿಲ್ಲೆಯಲ್ಲಿ ತಮ್ಮ ನೂತನ ಆಡಳಿತ ಭವನದಲ್ಲಿ ಜಿಲ್ಲಾ ನೋಂದಣಿ ಕಛೇರಿಗೆ ಜಿಲ್ಲಾಧಿಕಾರಿಯವರು ತಮ್ಮ ಪತ್ರ ದಿನಾಂಕ: 28.08.2008 ರಲ್ಲಿ ಒಂದು ಕೊಠಡಿಯನ್ನು ಹಂಚಿಕೆ ಮಾಡಿದ್ದು, ಸದರಿ ಕೊಠಡಿಗೆ ವಿದ್ಯುತ್ತೀಕರಣ, ಕಂಪೂಟರ್ ಕೊಠಡಿ ಜಿಲ್ಲಾ ನೋಂದಣಾಧಿಕಾರಿಯವರಿಗೆ, ಸಿಬ್ಬಂದಿಯವರಿಗೆ, ಪ್ರತ್ಯೇಕ ಕೊಠಡಿ, ಕೆಲವು ಪೀಠೋಪಕರಣ, ಮತ್ತು ಇತ್ಯಾದಿ ಕಾಮಗಾರಿಗಳ ಅಗತ್ಯತೆ ಇದ್ದು, ಜಿಲ್ಲಾಧಿಕಾರಿಗಳ ಕಛೇರಿಯ ಕಾಮಗಾರಿ ವಹಿಸುತ್ತಿರುವ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿರುವ ನಿರ್ಮಿತಿ ಕೇಂದ್ರ ಗದಗ್ ಜಿಲ್ಲೆ ಇವರು ಜಿಲ್ಲಾ ನೋಂದಣಾಧಿಕಾರಿ ಕಛೇರಿಗೆ ಅಗತ್ಯವಿರುವ ಪೀಠೋಪಕರಣ ಇತ್ಯಾದಿಗಳ ಕಾಮಗಾರಿಯ ಬಗ್ಗೆ ರೂ.2,18,000/– ಗಳ ಅಂದಾಜು ಪತ್ರಿಕೆ ಸಲ್ಲಿಸಿದ್ದು, ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2001, ದಿನಾಂಕ 02.02.2001 ರಂತೆ ಇಲಾಖಾ ಮುಖ್ಯಸ್ಥರಿಗೆ ಅಧಿಕಾರವಿಲ್ಲದಿರುವುದರಿಂದ, ಸದರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಹಾಗೂ ಸದರಿ ವೆಚ್ಚವನ್ನು 2008–09ನೇ ಸಾಲಿನ ಆಯುವ್ಯಯದ ಲೆಕ್ಕಶೀರ್ಷಿಕೆ 2030–03–001–051 ರಡಿ ಭರಿಸಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ39 ಮುನೋಮು 2009, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಗದಗ ಜಿಲ್ಲೆಯಲ್ಲಿ ನಿರ್ಮಿಸಲಾದ ನೂತನ ಆಡಳಿತ ಭವನದಲ್ಲಿ ಜಿಲ್ಲಾ ನೋಂದಣಿ ಕಛೇರಿಗೆ ಜಿಲ್ಲಾಧಿಕಾರಿಯವರು ಹಂಚಿಕೆ ಮಾಡಲಾದ ಕೊಠಡಿಗೆ ಜಿಲ್ಲಾಧಿಕಾರಿ, ಗದಗ ಜಿಲ್ಲೆ, ಗದಗ ಇವರು ಅಧ್ಯಕ್ಷರಾಗಿರುವ ನಿರ್ಮಿತಿ ಕೇಂದ್ರ ಇವರು ವಿದ್ಯುತ್ತೀಕರಣ, ಕಂಪ್ಯೂಟರ್ ಕೊಠಡಿಯನ್ನು ಜಿಲ್ಲಾ ನೋಂದಣಾಧಿಕಾರಿಯವರಿಗೆ, ಸಿಬ್ಬಂದಿಯವರಿಗೆ, ಪ್ರತ್ಯೇಕ ಕೊಠಡಿ, ಕೆಲವು ಪೀಠೋಪಕರಣ, ಮತ್ತು ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲು ಅಂದಾಜು ವೆಚ್ಚ ರೂ.2,18,000/– ಗಳಿಗೆ (ಎರಡು ಲಕ್ಷದ ಹದಿನೆಂಟು ಸಾವಿರಗಳು ಮಾತ್ರ) ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2030–03–001–051ರಡಿ ಭರಿಸಬಹುದಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2001, ದಿನಾಂಕ 02.02.2001 ರಂತೆ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತು ಮುದ್ರಾಂಕ),

ಪಿ.ಆರ್. 963

**ವಿಷಯ:** ಸರ್ಕಾರಿ ಜಮೀನುಗಳ ಒತ್ತುವರಿಯನ್ನು ತೆರೆವುಗೊಳಿಸುವ ಉದ್ದೇಶದ ವೆಚ್ಚಕ್ಕಾಗಿ ಲೆಕ್ಕ ಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ಒದಗಿಸಿರುವ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ದಿ.08.08.2008.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008 ದಿ.20.10.2008.
3) ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ದಿ.21.01.2009.

**ಪ್ರಸ್ತಾವನೆ:**

ಸರ್ಕಾರದ ಜಮೀನನ್ನು ಗುರುತಿಸಲು ಹಾಗೂ ಅದನ್ನು ಒತ್ತುವರಿ ಮಾಡಿಕೊಂಡಿರುವುದನ್ನು ತೆರೆವುಗೊಳಿಸಲು ರಚಿಸಲಾಗಿರುವ / ರಚಿಸಲಾಗುವ ಕಾರ್ಯಪಡೆ ಉದ್ದೇಶಕ್ಕೆ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ಒಟ್ಟು ರೂ.104 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರಲ್ಲಿ ಸರ್ಕಾರದ ಆದೇಶ ದಿ.08.08.2008ರಲ್ಲಿ ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಅನಧಿಕೃತ ನಿರ್ಮಾಣಗಳ ತಡೆ, ಬೆಂಗಳೂರು ನಗರ ಜಿಲ್ಲೆ ಇವರಿಗೆ ರೂ.50 ಲಕ್ಷಗಳನ್ನು ಬಿಡುಗಡೆ ಮಾಲಾಗಿರುತ್ತದೆ. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶ ದಿ.20.10.2008ರಲ್ಲಿ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಹೊಸ ವಾಹನ ಖರೀದಿಸಲು ರೂ.5,63,905/– ಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಅಲ್ಲದೇ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಸರ್ಕಾರಿ ಆದೇಶ ದಿ.21.01.2009ರಲ್ಲಿ ವಿಶೇಷ

ಜಿಲ್ಲಾಧಿಕಾರಿಗಳು (ಜಾರಿದಳ), ಅನಧಿಕೃತ ನಿರ್ಮಾಣಗಳ ತಡೆ, ಬೆಂಗಳೂರು ನಗರ ಜಿಲ್ಲೆ ಇವರಿಗೆ ರೂ.25 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಮೇಲ್ಕಂಡ ಲೆಕ್ಕ ಶೀರ್ಷಿಕೆಯಲ್ಲಿ ಇನ್ನು ಬಾಕಿಯಿರುವ ಮೊತ್ತ ರೂ. 23,36,095/–ಗಳನ್ನು ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ) ಇವರಿಗೆ ಒತ್ತುವರಿ ತೆರವುಗೊಳಿಸುವ ಕಾರ್ಯಕ್ಕಾಗಿ ಬಿಡುಗಡೆ ಮಾಡಲು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ರೂ. 23,36,095/– ಗಳನ್ನು (ಇಪ್ಪತ್ತ ಮೂರು ಲಕ್ಷ ಮುವತ್ತಾರು ಸಾವಿರದ ತೊಂಬತ್ತೈದು ರೂಪಾಯಿಗಳು ಮಾತ್ರ) ಮೊತ್ತವನ್ನು ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಅನಧಿಕೃತ ನಿರ್ಮಾಣಗಳ ತಡೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈಗ ಬಿಡುಗಡೆ ಮಾಡಿರುವ ಮೊತ್ತವನ್ನು ಸಂಬಂಧಪಟ್ಟ ಕಛೇರಿಯ ಹಣ ಸೆಳೆಯುವ ಅಧಿಕಾರಿಗಳ ಲೆಕ್ಕ ಶೀರ್ಷಿಕೆಗೆ ಬಿಡುಗಡೆ ಮಾಡುವಂತೆಯೂ ಸಹ ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.964

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಹಳೇ ಮೈಸೂರು ರಾಜ್ಯ ಮತ್ತು ರಾಜ್ಯದ ಇತರೆ ಸಂಸ್ಥಾನ ಆಡಳಿತಗಳಿಗೆ ಸಂಬಂಧಿಸಿದ ಐತಿಹಾಸಿಕ ದಾಖಲೆಗಳನ್ನು ಹಾಗೂ ಗ್ರಂಥಗಳನ್ನು ಪ್ರಕಟಿಸುವ ಬಗ್ಗೆ.

**ಓದಲಾಗಿದೆ:**
1 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 51 ಎನ್‌ಎಐ 2008 ದಿನಾಂಕ 12.12.2008.
2 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 20 ಎಡಿಎಂ 2008 ದಿನಾಂಕ 13.01.2009.
3 ಸರ್ಕಾರದ ಆದೇಶ ಸಂಖ್ಯೆ. ಕ.ಸಂವಾಪ್ರ 10 ರಾಪಸ 2008 ದಿನಾಂಕ 08.12.2008.
4 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 20 ಎಡಿಎಂ 2008 ದಿನಾಂಕ 13.02.2009.
5 ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 593 ಬಿಆರ್‌ಎಸ್ 2008, ದಿನಾಂಕ 10.02.2009.

**ಪ್ರಸ್ತಾವನೆ:**

ಮೇಲೆ (1), (2) ಮತ್ತು (4)ರಲ್ಲಿ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರಗಳಲ್ಲಿ 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆ ಮಾಡಿರುವಂತೆ ಹಳೇ ಮೈಸೂರು ರಾಜ್ಯ ಮತ್ತು ರಾಜ್ಯದ ಇತರೆ ಸಂಸ್ಥಾನ ಆಡಳಿತಗಳಿಗೆ ಸಂಬಂಧಿಸಿದ ಐತಿಹಾಸಿಕ ದಾಖಲೆಗಳನ್ನು ಹಾಗೂ ಗ್ರಂಥಗಳನ್ನು ಪ್ರಕಟಿಸುವ ಬಗ್ಗೆ ಕ್ರಿಯಾಯೋಜನೆಯನ್ನು ಸಲ್ಲಿಸಿರುತ್ತಾರೆ. ಸದರಿ ಕ್ರಿಯಾಯೋಜನೆಯು ಈ ಕೆಳಕಂಡಂತಿದೆ.

| | | |
|---|---|---|
| 1 | ಯುರೋಪಿಯನ್ ರಾಷ್ಟ್ರಗಳಾದ ಯುನೈಟೆಡ್ ಕಿಂಗ್‌ಡಮ್ (ಯು.ಕೆ) ಫ್ರಾನ್ ಹಾಗೂ ಇತರೆ ದೇಶಗಳಿಗೆ ಭೇಟಿ ನೀಡಿ ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದ ಟಿಪ್ಪು ಹೈದರಾಲಿ ಕಿತ್ತೂರು ರಾಣಿ ಚೆನ್ನಮ್ಮ, ಬ್ರಿಟಿಷ್ ಕಮಿಷನರ್ ಆಡಳಿತ (1881–1947) ಐತಿಹಾಸಿಕ ಮಹತ್ವವುಳ್ಳ ದಾಖಲೆಗಳು, ಕರ್ನಾಟಕದ ರಾಜ್ಯದಲ್ಲಿ ಲಭ್ಯವಿಲ್ಲದಿರುವುದರಿಂದ ಸದರಿ ದಾಖಲೆಗಳ ಪ್ರತಿಗಳು (ಮೈಕ್ರೊಫಿಲಂ ಸಿಡಿ) ಪಡೆಯಲು ತಗಲಬಹುದಾದ ವೆಚ್ಚ ಹಾಗೂ ಪ್ರಯಾಣ ಭತ್ಯೆ | ರೂ 25.00 ಲಕ್ಷಗಳು |
| 2 | ಅಮೂಲ್ಯ ಅಪ್ರಕಟಿತ ದಾಖಲೆಗಳ ಪ್ರಕಟಣೆ, ಭಾರತೀಯ ಹಾಗೂ ಕರ್ನಾಟಕ ಇತಿಹಾಸ ಪರಂಪರೆ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪುಸ್ತಕಗಳು, ಐತಿಹಾಸಿಕ ಮಹತ್ವದ ಮಠಗಳಲ್ಲಿರುವ ಪುಸ್ತಕಗಳು, ದಾಖಲೆಗಳು, ಹಸ್ತಪ್ರತಿ, ಅಮೂಲ್ಯ ತಾಳೇಗರಿಗಳ ಹಾಗೂ ಮೋಡಿ ಕನ್ನಡ ದಾಖಲೆಗಳ ಪ್ರಕಟಣೆ ಕಾರ್ಯ | ರೂ 25.00 ಲಕ್ಷಗಳು |
| | **ಒಟ್ಟು** | **ರೂ 50.00 ಲಕ್ಷಗಳು** |

ಮೇಲೆ(3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯದಲ್ಲಿ ಒದಗಿಸಲಾದ ರೂ. 1.00 ಕೋಟಿಗಳಲ್ಲಿ ರೂ. 50.00 ಲಕ್ಷಗಳನ್ನು ಗ್ಯಾಸೆಟಿಯಾರ್ ಇಲಾಖೆಗೆ ಪುನರ್ ಹಂಚಿಕೆ ಮಾಡಿ ಉಳಿದ ರೂ. 50.00 ಲಕ್ಷಗಳನ್ನು ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆಗೆ ಬೇರ್ಪಡಿಸಿ ಹಂಚಲಾಗಿರುತ್ತದೆ. ಅದರಂತೆ ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯು ಸದರಿ ರೂ.50.00 ಲಕ್ಷಗಳನ್ನು ಮರು ಹೊಂದಾಣಿಕೆ ಮೂಲಕ ಮಂಜೂರಾತಿ ನೀಡಿರುತ್ತದೆ. ಈ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 1 ರಾಪಸ 2009, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆ ಮಾಡಿದ ಕಾರ್ಯಕ್ರಮದಂತೆ ಹಳೇ ಮೈಸೂರು ರಾಜ್ಯ ಮತ್ತು ರಾಜ್ಯದ ಇತರೆ ಸಂಸ್ಥಾನ ಆಡಳಿತಗಳಿಗೆ ಸಂಬಂಧಿಸಿದ ಐತಿಹಾಸಿಕ ದಾಖಲೆಗಳನ್ನು ಹಾಗೂ ಗ್ರಂಥಗಳನ್ನು ಪ್ರಕಟಿಸುವ ಬಗ್ಗೆ ಈ ಕೆಳಕಂಡ ಕ್ರಿಯಾಯೋಜನೆಯನ್ನು ಸರ್ಕಾರವು ಅನುಮೋದಿಸಿದೆ.

| | | |
|---|---|---|
| 1 | ಯುರೋಪಿಯನ್ ರಾಷ್ಟ್ರಗಳಾದ ಯುನೈಟೆಡ್ ಕಿಂಗ್‌ಡಮ್ (ಯು.ಕೆ) ಫ್ರಾನ್ ಹಾಗೂ ಇತರೆ ದೇಶಗಳಿಗೆ ಭೇಟಿ ನೀಡಿ ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದ ಟಿಪ್ಪು ಹೈದರಾಲಿ ಕಿತ್ತೂರು ರಾಣಿ ಚೆನ್ನಮ್ಮ, ಬ್ರಿಟಿಷ್ ಕಮಿಷನರ್ ಆಡಳಿತ (1881–1947) ಐತಿಹಾಸಿಕ ಮಹತ್ವವುಳ್ಳ ದಾಖಲೆಗಳು, ಕರ್ನಾಟಕದ ರಾಜ್ಯದಲ್ಲಿ ಲಭ್ಯವಿಲ್ಲದಿರುವುದರಿಂದ ಸದರಿ ದಾಖಲೆಗಳ ಪ್ರತಿಗಳು (ಮೈಕ್ರೊಫಿಲಂ ಸಿಡಿ) ಪಡೆಯಲು ತಗಲಬಹುದಾದ ವೆಚ್ಚ ಹಾಗೂ ಪ್ರಯಾಣ ಭತ್ಯೆ | ರೂ 25.00 ಲಕ್ಷಗಳು |
| 2 | ಅಮೂಲ್ಯ ಅಪ್ರಕಟಿತ ದಾಖಲೆಗಳ ಪ್ರಕಟಣೆ, ಭಾರತೀಯ ಹಾಗೂ ಕರ್ನಾಟಕ ಇತಿಹಾಸ ಪರಂಪರೆ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪುಸ್ತಕಗಳು, ಐತಿಹಾಸಿಕ ಮಹತ್ವದ ಮಠಗಳಲ್ಲಿರುವ ಪುಸ್ತಕಗಳು, ದಾಖಲೆಗಳು, ಹಸ್ತಪ್ರತಿ, ಅಮೂಲ್ಯ ತಾಳೇಗರಿಗಳ ಹಾಗೂ ಮೋಡಿ ಕನ್ನಡ ದಾಖಲೆಗಳ ಪ್ರಕಟಣೆ ಕಾರ್ಯ | ರೂ 25.00 ಲಕ್ಷಗಳು |
| | **ಒಟ್ಟು** | **ರೂ 50.00 ಲಕ್ಷಗಳು** |

ಈ ಮೇಲ್ಕಂಡ ಕ್ರಿಯಾಯೋಜನೆಯ ಕ್ರಮ ಸಂಖ್ಯೆ (1) ರಲ್ಲಿ ತಿಳಿಸಿರುವಂತೆ ವಿದೇಶಗಳಿಗೆ ಭೇಟಿ ನೀಡುವ ವಿಷಯದಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು. ಮೈಕ್ರೊಫಿಲಂ ಸಿಡಿ ದಾಖಲೆಗಳ ಬಗ್ಗೆ ಹಾಗೂ ಕ್ರಮ ಸಂಖ್ಯೆ (2)ರಲ್ಲಿ ನಮೂದಿಸಲಾದ ದಾಖಲೆ ಪ್ರಕಟಣೆ ಇತ್ಯಾದಿಗಳ ಬಗ್ಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–104–0–01–059 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆರವರ ಟಿಪ್ಪಣಿ ಸಂಖ್ಯೆ : ಇಡಿ 76 ಐಎಫ್ (ಬಿಎ) 2009 ದಿನಾಂಕ 09.03.2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 965 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 11 ಸಅಸೇ 2009, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 6.10.2008 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ (ವೇತನ ಶ್ರೇಣಿ 18400–22400) ಎಂದು ನಿಮ್ನೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 966 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜಿ. ಶ್ರೀನಿವಾಸರಾವ್, ಸಿ.ಎಚ್.ಸಿ.–474, ಸಂಚಾರ, ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (4) ಶಿಕ್ಷೆ /120/07/ಓ.ಬಿ.440/07 ದಿನಾಂಕ 22–11–2007.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 31/ಸಿಬ್ಬಂದಿ 2/2007–08 ಓ.ಬಿ:307/2007–08 ದಿನಾಂಕ 25.03.2008.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 9–6–08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/30/2008–09 ದಿನಾಂಕ: 24–11–2008.

**ಪ್ರಸ್ತಾವನೆ:–**

ಶ್ರೀ ಜೆ. ಶ್ರೀನಿವಾಸರಾವ್, ಸಿ.ಎಚ್.ಸಿ.–474, ಸಂಚಾರ ಪೊಲೀಸ್ ಠಾಣೆ, ಶಿವಮೊಗ್ಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಧಿಕಾರ ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ತೀವ್ರ ಲೋಪವೆಸಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶಿವಮೊಗ್ಗದ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯವು ಸಿ.ಸಿ. 7042:06ರಲ್ಲಿ ಶ್ರೀ ವೇಲು ಚಕ್ಕಮರಡಿ ಗ್ರಾಮ ಇವರಿಗೆ ವಾರೆಂಟ್ ಹೊರಡಿಸಿದ್ದು, ನೀವು ಸದರಿ ವಾರೆಂಟ್ ಆಸಾಮಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸದೆ ವಾರೆಂಟ್‌ನ ಬಾಬ್ತು ದಂಡದ ಹಣವೆಂದು ಅವರಿಂದ 3 ಬಾರಿ ಒಟ್ಟು 780–00 ರೂ.ಗಳನ್ನು ಪಡೆದು ಅದನ್ನು ನ್ಯಾಯಾಲಯಕ್ಕೆ ಕಟ್ಟದೆ ಅಧಿಕಾರ ದುರುಪಯೋಗಪಡಿಸಿಕೊಂಡು ಕತವ್ಯದಲ್ಲಿ ತೀವ್ರ ಲೋಪವೆಸಗಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ 22–11–2007ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿ ದಿ.15–06–07 ರಿಂದ 29–07–2007 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 25.03.2008 ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 02 ಪೊಸಿಅ 2009, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಶ್ರೀನಿವಾಸರಾವ್, ಸಿ.ಎಚ್.ಸಿ.–474 ಸಂಚಾರ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 968 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ವಿ.ಸುರೇಶ್, ಪೊಲೀಸ್ ಇನ್ಸ್‌ಪೆಕ್ಟರ್, ಮುಲ್ಕಿ ವೃತ್ತ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಡಿಇ/40/ಉವ/2006–07 ದಿ:01–02–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)15/2007–08 ದಿನಾಂಕ:22.12.2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:07.01.2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)9/2007–08 ದಿನಾಂಕ:05.09.2008.

**ಪ್ರಸ್ತಾವನೆ:**

ಶ್ರೀ ಬಿ.ವಿ.ಸುರೇಶ್, ಪೊಲೀಸ್ ಇನ್ಸ್‌ಪೆಕ್ಟರ್, ಇವರು ರಾಮದುರ್ಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ವತನ ಹಾಗೂ ಕರ್ತವ್ಯಲೋಪ ಎಸಗಿರುವ ಹಿನ್ನಲೆಯಲ್ಲಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ಆಪಾದಿತ ಪೊಲೀಸ್ ಅಧಿಕಾರಿ ಬಿ.ವಿ.ಸುರೇಶ್, ಪೊಲೀಸ್ ವೃತ್ತ ನಿರೀಕ್ಷಕರು, ರಾಮದುರ್ಗ ವೃತ್ತ, ರಾಮದುರ್ಗ ರವರಾದ ನೀವು

1) ಪ್ರಾಥಮಿಕ ಆರೋಗ್ಯ ಕೇಂದ್ರ ಕಟಕೋಳದ ವೈದ್ಯಾಧಿಕಾರಿಗಳು ಪೋಸ್ಟ್‌ಮಾರ್ಟಮ್ ವರದಿಯಲ್ಲಿ ಮೃತಳ ಬಲಕಿವಿಯಿಂದ ಎಡಕಿವಿಯವರೆಗೆ ಗಾಯದ ಗುರುತಿದ್ದು ಮರಣವು ಉರುಲು ಹಾಕಿದ್ದರಿಂದ ಸಂಭವಿಸಿರುವುದಾಗಿ ಹೇಳಿದ್ದಾರೆ. ಈ ಗಾಯವು ಸ್ಪಷ್ಟವಾಗಿ ಕಾಣುವಂತೆ ಇದ್ದರೂ ಸಹ ಪಂಚನಾಮಾ ವರದಿಯಲ್ಲಿ ಈ ಗಾಯದ ಗುರುತಿನ ಬಗ್ಗೆ ನಮೂದಿಸದೇ ನೀವು ನಿಮ್ಮ ಕರ್ತವ್ಯದಲ್ಲಿ ಘೋರ ಕರ್ತವ್ಯಚ್ಯುತಿ ಎಸಗಿರುತ್ತೀರಿ.
2) ಮೃತಳ ಸಾವಿನ ಬಗ್ಗೆ ಮತ್ತು ಅವಳ ಮೈಮೇಲಿನ ಗಾಯಗಳ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸದೇ ಯಾವ ರೀತಿಯ ಗಾಯಗಳೆಂದು ಸರಿಯಾಗಿ ತಪಾಸಣೆ ಮಾಡದೇ ಮೃತಳ ಮೈಮೇಲಿನ ಗಾಯಗಳು ಪೋಸ್ಟ್‌ಮಾರ್ಟಮ್ ಪೂರ್ವದಲ್ಲಿ ಆದವುಗಳೇ ಅಥವಾ ನಂತರದವುಗಳೇ ಅನ್ನುವ ಬಗ್ಗೆ ಮತ್ತು ಈ ಗಾಯಗಳು ಯಾವುದಾದರೂ ಆಯುಧದಿಂದ ಆದವು ಅನ್ನುವ ಬಗ್ಗೆ ವಿವರವಾಗಿ ವೈದ್ಯಾಧಿಕಾರಿಗಳಿಂದ ವರದಿ ಪಡೆಯದೇ ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ಮತ್ತು ಕರ್ತವ್ಯಚ್ಯುತಿ ಪ್ರದರ್ಶಿಸಿರುತ್ತೀರಿ.
3) ದಿನಾಂಕ: 17–08–2005 ರಂದು ವೈದ್ಯಾಧಿಕಾರಿಗಳಿಂದ ಪೋಸ್ಟ್‌ಮಾರ್ಟಮ್ ವರದಿಯನ್ನು ಸ್ವೀಕರಿಸಿದರೂ ಸಹ ಪೋಸ್ಟ್‌ಮಾರ್ಟಮ್ ವರಧಿಯನ್ನಾಧರಿಸಿ ತನಿಖೆಯನ್ನು ಮಾಡಿರುವುದಿಲ್ಲ ಮತ್ತು ಸಾವು ಉರುಲು ಹಾಕಿದ್ದರಿಂದ ಸಂಭವಿಸಿದೆ ಅನ್ನುವ ಬಗ್ಗೆ ಮಾಹಿತಿಗಳನ್ನು ಕಲೆ ಹಾಕಿ ಸಕಾರಣಗಳೊಂದಿಗೆ ಪ್ರಕರಣಗಳನ್ನು ಪುಷ್ಟೀಕರಿಸದೇ ಮರಣಕ್ಕೆ ಕಾರಣವಾದ ಆಯುಧ/ವಸ್ತುಗಳನ್ನು ಜಪ್ತ ಮಾಡದೇ ಅಥವಾ ಮಾಡಲು ಪ್ರಯತ್ನಿಸದೇ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಕರ್ತವ್ಯಲೋಪ ಎಸಗಿರುತ್ತೀರಿ.
4) ಫಿರ್ಯಾದಿದಾರರಾದ ಶ್ರೀ ಬಾಳಪ್ಪ ಬೊಮ್ಮಣ್ಣವರ ಸಾ:ಸಿಂಚನೂರ ಇವರು ತಮ್ಮ ಫಿರ್ಯಾದಿ ಅರ್ಜಿಯಲ್ಲಿ ದುರ್ಗಪ್ಪ ನಿಂಗಪ್ಪ ಬೊಮ್ಮಣ್ಣವರ ಅನ್ನುವ ಸಂಶಯುಕ್ತ ವ್ಯಕ್ತಿಯ ಬಗ್ಗೆ ಸ್ಪಷ್ಟವಾಗಿ ಫಿರ್ಯಾದದಲ್ಲಿ ಪ್ರಸ್ತಾಪಿಸಿದ್ದರೂ ಸಹ ಅವನನ್ನು ಬಂಧಿಸಿ ಸತ್ಯ ಹೊರಗೆಡವುವಲ್ಲಿ ವಿಫಲರಾಗಿದ್ದೂ ಅಲ್ಲದೆ ಸದರಿ ವ್ಯಕ್ತಿಯನ್ನು ಸಾಕ್ಷಿದಾರರನ್ನಾಗಿ ಮಾಡಿ ಸಿಆರ್‌ಪಿಸಿ ಕಲಂ 161ರಲ್ಲಿ ಹೇಳಿಕೆಯನ್ನು ಪಡೆದುಕೊಂಡು ನೀವು ನಿಮ್ಮ ಕರ್ತವ್ಯದಲ್ಲಿ ಘೋರನಿರ್ಲಕ್ಷತನ ಮತ್ತು ಕರ್ತವ್ಯಲೋಪ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:01–02–2007ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:22–12–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 11 ಪೊಸಿಅ 2009, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಬಿ.ವಿ.ಸುರೇಶ್, ಪೊಲೀಸ್ ಇನ್ಸ್‌ಪೆಕ್ಟರ್, ಮುಲ್ಕಿ ವೃತ್ತ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 970

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಬಳ್ಳಾರಿ ಜಿಲ್ಲೆ ಸಿರಗುಪ್ಪಾದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಇವರ ಆದೇಶ ನಂ:ಪ.ನಿ./20/88–89, ದಿನಾಂಕ 16.03.89.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವಾಜ್ಯಗಳ ಇಲಾಖೆ ಬೆಂಗಳೂರು ಇವರ ಪತ್ರ ಸಂ:ಡಿಪಿಎನ್/ಸ್ಥಳಾವ/14/06–07, ದಿನಾಂಕ:28.02.2007 ಮತ್ತು 26.02.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 16.03.89ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ಬಳ್ಳಾರಿ ಜಿಲ್ಲೆ ಸಿರಗುಪ್ಪ ಪಟ್ಟಣದ ಸರ್ವೆ ನಂ. 417/ಎ/1ಎರಲ್ಲಿ 60X40 ಚದರ ಅಡಿ ಜಾಗವನ್ನು ಅಭಿಯೋಜನಾ ಇಲಾಖೆಗೆ ಮಂಜೂರು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ : 28.02.2007 ಮತ್ತು 26.02.2009 ರ ಪತ್ರಗಳಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವಾಜ್ಯಗಳ ಇಲಾಖೆ, ಬೆಂಗಳೂರು ಇವರು ಬಳ್ಳಾರಿ ಜಿಲ್ಲೆ ಸಿರಗುಪ್ಪದಲ್ಲಿ ಬಳ್ಳಾರಿ ಜಿಲ್ಲೆ ಜಿಲ್ಲಾಧಿಕಾರಿಗಳು ಮಂಜೂರು ಮಾಡಿರುವ ಸ್ಥಳದಲ್ಲಿ ಸಹಾಯಕ ಸರ್ಕಾರಿ ಅಭಿಯುತರ ವಸತಿ ಗೃಹ ಕಟ್ಟಡವನ್ನು ನಿರ್ಮಾಣ ಮಾಡುವ ಕಾಮಗಾರಿಗೆ ಕಾರ್ಯ ನಿರ್ವಾಹಕ ಅಭಿಯಂತರರು ಲೋಕೋಪಯೋಗಿ ಇಲಾಖೆ, ಬಳ್ಳಾರಿ ವಿಭಾಗ, ಬಳ್ಳಾರಿ ಇವರು ತಯಾರಿಸಿರುವ ಅಂದಾಜು ಪಟ್ಟಿಯನ್ನು ಸಲ್ಲಿಸುತ್ತಾ, ಸದರಿ ಕಾಮಗಾರಿಗೆ 2008–09ನೇ ಸಾಲಿನ ಅಪೆಂಡಿಕ್ಸ್ – 'ಇ' ನಲ್ಲಿ ರೂ.6.25 ಲಕ್ಷಗಳ ಅನುದಾನವನ್ನು ಒದಗಿಸಿರುವುದರಿಂದ, ಲೋಕೋಪಯೋಗಿ ಇಲಾಖೆಯ ಅಭಿಯಂತರರು ಸಲ್ಲಿಸಿರುವ ರೂ.6.25 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 119 ಪಿಪಿಇ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬಳ್ಳಾರಿ ಜಿಲ್ಲೆ ಸಿರಗುಪ್ಪ ಪಟ್ಟಣದ ಸರ್ವೆ ನಂ.417/ಎ/1ಎ ರಲ್ಲಿ 60 X 40 ಚದರ ಅಡಿಗಳ ಜಾಗದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹದ ನಿರ್ಮಾಣದ ಕಾಮಗಾರಿಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ರೂ.6.25 (ಆರು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು)ಗಳ ಅನುದಾನವನ್ನು ಒದಗಿಸಲಾಗಿದ್ದು, ಸದರಿ ಕಾಮಗಾರಿಯ ಕೆಲಸವನ್ನು ಪ್ರಾರಂಭಿಸಲು ಮತ್ತು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ವಿಭಾಗ, ಬಳ್ಳಾರಿ ಇವರು ತಯಾರಿಸಿರುವ ರೂ. 6.25 (ಆರು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು)ಗಳ ಅಂದಾಜು ಪಟ್ಟಿಗೆ ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 15909 ಆಂಆಸ 2009 ದಿನಾಂಕ: 12.03.2009 ರ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 1996, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 971

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

## ಆರ್ಥಿಕ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಆಇ 19 ಬಿಪಿಇ 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಸರ್ಕಾರದ ಆದೇಶ ಸಂಖ್ಯೆ ಆಇ 19 ಬಿಪಿಇ 2008, ದಿ: 23.12.2008ರ ಕ್ರ. ಸಂ. 4ರಲ್ಲಿ "ದಿನಾಂಕ: 14.3.2009 ರೊಳಗೆ" ಎಂದಿರುವುದನ್ನು "ದಿನಾಂಕ: 23.3.2009 ರೊಳಗೆ" ಎಂದು ಓದಿಕೊಳ್ಳತಕ್ಕದ್ದು.

ಸರ್ಕಾರದ ಆದೇಶ ಸಂಖ್ಯೆ: ಆಇ 19 ಬಿಪಿಇ 2008, ದಿ: 23.12.2008 ರ ಕ್ರ. ಸಂ. 9ರಲ್ಲಿ "ದಿನಾಂಕ: 10.3.2009 ರೊಳಗೆ" ಎಂದಿರುವುದನ್ನು "ದಿನಾಂಕ: 21.3.2009ರೊಳಗೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಜಯ್ ಸೇಠ್**

ಪಿ.ಆರ್. 972 ಸರ್ಕಾರದ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ).

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ನಂ. ಒಇ 20 ಪಿಪಿಇ 2009, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಸರ್ಕಾರದ ಆದೇಶ ನಂ ಒಇ 20 ಪಿಪಿಇ 2009 ದಿನಾಂಕ 24.02.2009 ರ ಪ್ರಸ್ತಾವನೆಯ 4ನೇ ಕಂಡಿಕೆಯ 2ನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ 2ನೇ ಸಾಲಿನಲ್ಲಿ "ಸಂಕೇಶ್ವರ್" ಎಂಬುದರ ಬದಲಾಗಿ "ಜೇವರ್ಗಿ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 24.02.2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 975 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

### ತಿದ್ದುಪಡಿ

**ನಂ. ಒಇ 180 ಪಿಪಿಇ 2009, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಸರ್ಕಾರದ ಆದೇಶ ನಂ ಓಇ 561 ಪಿಪಿಇ 2008 ದಿನಾಂಕ 18.02.2009 ರ ಪ್ರಸ್ತಾವನೆಯ 4ನೇ ಕಂಡಿಕೆಯ ಮೊದಲನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ ಮೊದಲನೇ ಸಾಲಿನಲ್ಲಿ "ಶ್ರೀಮತಿ ಸತ್ಯವತಿ" ಎಂಬುದರ ಬದಲಾಗಿ "ಶ್ರೀಮತಿ ಹೆಚ್.ಆರ್.ಸತ್ಯವತಿ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 18.02.2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 976 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಕಂದಾಯ ಸಚಿವಾಲಯ

**ಸರ್ಕಾರದ ಆದೇಶ ಸಂ.ಕಂಇ 911 ಎಲ್.ಜಿ.ಬಿ. 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

**ವಿಷಯ:** ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 17/9/2008 ರಂದು ನೀಡಿರುವ ಆದೇಶದನ್ವಯ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಕ್ರಮ ಕೈಗಳ್ಳುವ ಬಗ್ಗೆ.

ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ 17/9/2008 ರಂದು ನೀಡಿರುವ ಆದೇಶದಲ್ಲಿ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಸೂಚನೆಗಳನ್ನು ನೀಡಲಾಗಿದೆ:–

"The lake area as per the revenue records will be surveyed by the Revenue Department and would be fenced at the cost of the respondents"

ಮೇಲಿನ ಆದೇಶದಂತೆ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಈಗಾಗಲೇ ಕೆರೆ ಪ್ರದೇಶಗಳ ಸರ್ವೆ ಪೂರ್ಣಗೊಂಡಿದ್ದಲ್ಲಿ ಅವುಗಳ ಪೂರ್ಣ ವಿವರಗಳನ್ನು ಕೆರೆ ಅಭಿವೃದ್ಧಿ ಪ್ರಾಧಿಕಾರದವರಿಗೆ ಮತ್ತು ಇತರೆ ಸಂಸ್ಥೆಗಳಿಗೆ ಕಳುಹಿಸಿ, ಕೋರ್ಟಿನ ಆದೇಶದಂತೆ ತಂತಿ ಬೇಲಿ ನಿರ್ಮಿಸಲು ಕ್ರಮ ಕೈಗೊಳ್ಳುವಂತೆ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.

ಈ ವಿಷಯದ ಬಗ್ಗೆ ದಿನಾಂಕ 31/1/2009ರಂದು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ನಿರ್ಣಯಗಳ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ದಾಖಲೆಗಳಲ್ಲಿ

ಸರ್ಕಾರಿ ಕೆರೆಗಳೆಂದು ನಮೂದಾಗಿದ್ದು, ಹಾಲಿ ಅವುಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗೋಸ್ಕರ ಬಿಬಿಎಂಪಿ, ಬಿಡಿಎ, ಜಿಲ್ಲಾ ಪಂಚಾಯತ್ ಮತ್ತು ನೀರಾವರಿ ಇಲಾಖೆಗಳ ಸುಪರ್ದಿಗೆ ನೀಡಲಾಗಿರುವ ಕೆರೆಗಳನ್ನು ಆಯಾಯ ಇಲಾಖೆಗಳು ನಿರ್ವಹಿಸುತ್ತಿದ್ದು, ಇಂತಹ ನಿರ್ವಹಣೆಯು ಸದರಿ ಕೆರೆಗಳ ಒತ್ತುವರಿಗಳ ಸಂರಕ್ಷಣೆ ಮತ್ತು ಇಂತಹ ಒತ್ತುವರಿ ಬಗ್ಗೆ ನ್ಯಾಯಾಲಯದಲ್ಲಿ ದಾಖಲಾದ ಪ್ರಕರಣಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುವುದು ಸಹ ಆಯಾಯ ಇಲಾಖೆಗಳ ಕರ್ತವ್ಯ ಆಗಿರುತ್ತದೆ.

ಆದರೂ ಮೇಲಿನ ಸಭೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯದ ಹಿನ್ನಲೆಯಲ್ಲಿ ಯಾವ ಯಾವ ಇಲಾಖೆಗಳು ಸರ್ಕಾರಿ ಕೆರೆಗಳನ್ನು ತಮ್ಮ ಸುಪರ್ದಿಯಲ್ಲಿ ಇಟ್ಟುಕೊಂಡು ನಿರ್ವಹಿಸುತ್ತಿವೆಯೋ ಅಂತಹ ಇಲಾಖೆಗಳಿಗೆ ಸದರಿ ಕೆರೆಗಳನ್ನು ಸಂರಕ್ಷಿಸುವ ಹಾಗೂ ಅಂತಹ ಕೆರೆಗಳನ್ನು ಒತ್ತುವರಿಯಿಂದ ತೆರೆವುಗೊಳಿಸಲು ಅಗತ್ಯವಿರುವ ಹಾಗೂ ಈ ಸಂಬಂಧ ಕೋರ್ಟಿನಲ್ಲಿ ಹೂಡಿರುವ/ಹೂಡಬಹುದಾದ ದಾವೆಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಹಾಗೂ defend ಮಾಡಿಕೊಳ್ಳಲು ಈ ಮೂಲಕ ಅಧಿಕಾರ ನೀಡಲಾಗಿದೆ.

ಕೆರೆಗಳ ಒಡೆತನವನ್ನು ಆಯಾಯ ಇಲಾಖೆಗಳಿಗೆ ಹಸ್ತಾಂತರಿಸುವ ಬಗ್ಗೆ ಪ್ರತ್ಯೇಕವಾದ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 978

**ಇ. ಈಶ್ವರ್ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ).

**ವಿಷಯ:** ಶ್ರೀಮತಿ ಬಿ.ಆರ್. ರೂಪ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ:15–04–2006.

2) ಶ್ರೀಮತಿ ಬಿ.ಆರ್. ರೂಪ, ತಹಶೀಲ್ದಾರ್ ಇವರ ಮನವಿ ದಿನಾಂಕ: 23–02–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 15.04.2006ರ ಅಧಿಸೂಚನೆಯಲ್ಲಿ, ಶ್ರೀಮತಿ ಬಿ.ಆರ್. ರೂಪ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಪ್ರೌಢಶಾಲಾ, ಸಹ ಶಿಕ್ಷಕರಾಗಿ ಸರ್ಕಾರಿ ಪ್ರಾಢಶಾಲೆ ಅಕ್ಕನಹಳ್ಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿ ದಿನಾಂಕ: 04.11.98 ರಿಂದ 19.04.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ವಿಭಾಗೀಯ ಕಾರ್ಯದರ್ಶಿಗಳು ಹಾಗೂ ಪದನಿಮಿತ್ತ ಜಂಟಿ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಜ್ಞಾಪನ ಸಂ:ಆ4:ಇಲಾಖಾ ಅನು.ಬಗ್ಗೆ.05:2006–07, ದಿನಾಂಕ: 19.04.2006ರನ್ವಯ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಶ್ರೀಮತಿ ರೂಪಾರವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ:04.11.98 ರಿಂದ 19.04.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀಮತಿ ಬಿ.ಆರ್. ರೂಪ, ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ಜಿಲ್ಲೆ ಇವರ ಮನವಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ, ಸಹಶಿಕ್ಷಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 04.11.98 ರಿಂದ 19.04.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 123 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀಮತಿ ಬಿ.ಆರ್. ರೂಪ, ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ವಿಭಾಗ, ಮೈಸೂರರ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 04.11.98 ರಿಂದ 19.04.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: 1403 ವೆಚ್ಚ–7/2008, ದಿನಾಂಕ: 15.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 979

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**REVENUE SECRETARIAT**

**NOTIFICATION**

**No. RD 1 TNV 2007, Bangalore, Dated:26th February, 2009**

As per the No Objection received from the Ministry of Home Affairs, Government of India vide their letter No.11/12/2007-M&G Dated:06.02.2009 and as per the correct and approved spellings in Devanagari and Roman language given by the Ministry of Science and Technology, Government of India vide their Official Memorandum No.SM/28/20/2008 Dated:14.02.2009, the name of “Byndoor” Railway Station in Kundapur Taluk, Udupi District, Karnataka ha been changed as “Mookambika Road Byndoor”. The Devanagari, Roman and Regional Language (Kannada) script of the new name as given by the Survey of India will be as under:

| Devanagari Script | Roman Script | Regional Language (Kannada) Script |
|---|---|---|
| मूकांबिका रोड बैन्दूर | MOOKAMBIKA ROAD BYNDOOR | ಮೂಕಾಂಬಿಕಾ ರೋಡ್ ಬೈಂದೂರು |

3) This will come into effect from the date of publication of this notification in the official Gazette.

By order and in the name of the Governor of Karnataka,

**M. VENKATESHAMURTHY**

Under Secretary to Government

(Rehabilitation & LAQ-2) Revenue Department.

PR-758

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಶ್ರೀ ಎಸ್.ಪಿ. ರಾಜು, ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರ ರಜಾ ಅವಧಿ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರಗಳ ಸಂಖ್ಯೆ ಎ2/ರಜೆ/ಸಿಆರ್–12/2008–09, ದಿನಾಂಕ:05.07.2008 ಮತ್ತು 20.09.2008.

**ಪ್ರಸ್ತಾವನೆ:**

ಶ್ರೀ ಎಸ್.ಪಿ. ರಾಜು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ, ಹಾವೇರಿ ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 161 ಅಪಸೇ 2007, ದಿನಾಂಕ:30.08.2007ರಲ್ಲಿ ವಿಭಾಗೀಯ ವ್ಯವಸ್ಥಾಪಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ, ಮೂಡಬಿದರೆ ಹುದ್ದೆಗೆ ವರ್ಗಾಯಿಸಲಾಗಿತ್ತು. ಅದರಂತೆ ಸದರಿಯವರು ಈ ಹುದ್ದೆಯ ಪ್ರಭಾರವನ್ನು ದಿನಾಂಕ:03.09.2007 ರಂದು ವಹಿಸಿಕೊಟ್ಟು ಅನಾರೋಗ್ಯದ ನಿಮಿತ್ತ ದಿನಾಂಕ:03.09.2007 ರಿಂದ 13.01.2008 ರವರೆಗೆ ವೈದ್ಯಕೀಯ ರಜೆ ಕೋರಿದ್ದು, ದಿನಾಂಕ:03.09.2007 ರಿಂದ 29.12.2007 ರವರೆಗೆ ವೈದ್ಯಕೀಯ ಆಧಾರದ ಮೇಲೆ 118 ದಿನ ಪರಿವರ್ತಿತ ರಜೆ ಮತ್ತು ದಿನಾಂಕ:30.12.2007 ರಿಂದ 13.01.2008ರ ಅವಧಿಗೆ 15 ದಿನಗಳ ಗಳಿಕೆ ರಜೆ ಒಟ್ಟು 133 ದಿನಗಳ ಸಂಯುಕ್ತ ರಜೆಯನ್ನು ಮಂಜೂರು ಮಾಡಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾದಿಕಾರಿಯವರು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 182 ಅಪಸೇ 2008, ಬೆಂಗಳೂರು, ದಿನಾಂಕ:24ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಎಸ್.ಪಿ. ರಾಜು, ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ದಿನಾಂಕ:03.09.2007 ರಿಂದ 13.01.2008 ರವರೆಗಿನ ಅವಧಿಯನ್ನು ವೈದ್ಯಕೀಯ ಕಾರಣಗಳ ಮೇಲೆ ಈ ಕೆಳಗಿನಂತೆ ಸಂಯುಕ್ತ ರಜೆಯನ್ನು ಮಂಜೂರು ಮಾಡಿದೆ.

1) ದಿನಾಂಕ:03.09.2007 ರಿಂದ 29.12.2007 ರವರೆಗೆ – 118 ದಿನಗಳ ಪರಿವರ್ತಿತ ರಜೆ.

2) ದಿನಾಂಕ:30.12.2007 ರಿಂದ 13.01.2008ರವರೆಗೆ – 15 ದಿನಗಳ ಗಳಿಕೆ ರಜೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

ಪಿ.ಆರ್.760

**ವಿಷಯ:** ಶ್ರೀ ಸತೀಶ್ ಬಾಬಾ ರೈ ವಲಯ ಅರಣ್ಯಾಧಿಕಾರಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, ನಿಯಮ 32 ರಡಿಯಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ವೃಂದಕ್ಕೆ ನೀಡಲಾದ ಬಡ್ತಿಯನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 138 ಅಪಸೇ 2006, ದಿನಾಂಕ:01.06.2007.

2) ಶ್ರೀ ಸಿ. ಪ್ರಕಾಶ್, ವಕೀಲರು, ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಜಾರಿ ಮಾಡಿರುವ ಲೀಗಲ್ ನೋಟೀಸ್ ದಿನಾಂಕ:04.02.2008.

3) ಸರ್ಕಾರದ ನೋಟೀಸ್ ಸಂಖ್ಯೆ: ಅಪಜೀ 200 ಅಇವಿ 2007, ದಿನಾಂಕ:09.09.2008.

4) ಶ್ರೀ ಸತೀಶ್ ಬಾಬಾ ರೈ ವಲಯ ಅರಣ್ಯಾಧಿಕಾರಿ ಇವರ ಸಮಜಾಯಿಷಿ ದಿನಾಂಕ:20.10.2008.

**ಪ್ರಸ್ತಾವನೆ:**

ಶ್ರೀ ಸತೀಶ್ ಬಾಬಾ ರೈ ವಲಯ ಅರಣ್ಯಾಧಿಕಾರಿ ಇವರಿಗೆ ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:01.06.2007ರ ಅಧಿಸೂಚನೆಯಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿರಿಸಿದೆ. ಶ್ರೀ ಪ್ರಕಾಶ್, ವಕೀಲರು ಶ್ರೀ ದಾಸ ನಾಯಕ್ ಇವರು ಪರವಾಗಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನೋಟೀಸ್‌ನಲ್ಲಿ ಶ್ರೀ ಟಿ.ಕೆ. ರಂಗನಾಥ್ ಮತ್ತು ಶ್ರೀ ಸತೀಶ್ ಬಾಬಾ ರೈ ಇವರುಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದರೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಬಡ್ತಿ ನೀಡಿರುವುದನ್ನು ಹಿಂಪಡೆಯಲು ಮತ್ತು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಕೋರಿದ್ದಾರೆ.

ಶ್ರೀ ಪ್ರಕಾಶ್ ರವರು ನೀಡಿರುವ ನೋಟೀಸ್‌ನಲ್ಲಿ ಪ್ರಸ್ತಾಪಿಸಿರುವಂತೆ ತೀರ್ಥಹಳ್ಳಿ, ಜೆಎಂಎಫ್‌ಸಿ ನ್ಯಾಯಾಲಯ ಪ್ರಕರಣ ಸಂಖ್ಯೆ: 462/99ರಲ್ಲಿ ದಿನಾಂಕ:20.01.2007ರಂದು ನೀಡಿರುವ ಆದೇಶದಲ್ಲಿ ಶ್ರೀ ಸತೀಶ್ ಬಾಬಾ ರೈ ಅಂದಿನ ವಲಯ ಅರಣ್ಯಾಧಿಕಾರಿ, ಶ್ರೀ ಟಿ.ಎ. ರಂಗನಾಥ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಇತರರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:3ನ್ನು ದಾಖಲು ಮಾಡಿ ಆದೇಶಿಸಿದೆ.

ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಂತರ ಮತ್ತು ಮುಂಬಡ್ತಿ ನೀಡುವ ಅವಧಿಯೊಳಗೆ ಇಲಾಖಾ/ ಕ್ರಿಮಿನಲ್ ವಿಚಾರಣೆ ಪ್ರಾರಂಭಿಸಿದ್ದಲ್ಲಿ, ಅಂತಹ ಪ್ರಕರಣಗಳನ್ನು ಹೇಗೆ ಪರಿಗಣಿಸಬೇಕೆಂಬುದರ ಬಗ್ಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಎಸ್‌ಆರ್ 98, ದಿನಾಂಕ:14.07.99ರಲ್ಲಿ ಸ್ಪಷ್ಟಪಡಿಸಿದೆ. ಸದರಿ ಅಧಿಕೃತ ಜ್ಞಾಪನದ ಕಂಡಿಕೆ 3(ಬಿ) ಯ ಉಧೃತ ಭಾಗ ಈ ಕೆಳಕಂಡಂತಿದೆ:

"Where the Departmental Promotion Committee has recommended the promotion of a Government servant, but before he is actually promoted, if disciplinary proceedings or criminal prosecution of proceedings are initiated against him, his case shall be treated as if it has been placed in a sealed cover by the Departmental Promotion Committee and he shall not be promoted, Further action shall be taken in accordance with paras-4 and 5, mutatiles mutandis".

ಶ್ರೀ ಸತೀಶ್ ಬಾಬಾ ರೈ ಇವರನ್ನು ಸ್ವತಂತ್ರ ಪ್ರಭಾರದಲ್ಲಿರಿಸುವ ಸಂಬಂಧ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ದಿನಾಂಕ:19.12.2006 ರಂದು ಜರುಗಿಸಲಾಗಿದೆ. ತದನಂತರ ದಿನಾಂಕ:21.06.2007 ರಂದು ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶಿಸಲಾಗಿದೆ. ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕಕ್ಕೆ ಶ್ರೀ ಸತೀಶ್ ಬಾಬಾ ರೈ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಬಾಕಿ ಇರುತ್ತದೆ.

ಶ್ರೀ ಸತೀಶ್ ಬಾಬಾ ರೈ ಇವರನ್ನು ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕಕ್ಕೆ ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದುದರಿಂದ, ಸದರಿಯವರನ್ನು ಸ್ವತಂತ್ರ ಪ್ರಭಾರದಲ್ಲಿರಿಸಿರುವುದನ್ನು ಏಕೆ ಹಿಂಪಡೆಯಬಾರದು ಎಂಬ ಬಗ್ಗೆ ಸಮಜಾಯಿಷಿ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:09.09.2008ರ ಸೂಚಿಸಲಾಗಿತ್ತು.

ಶ್ರೀ ಸತೀಶ್ ಬಾಬಾ ರೈ ಇವರು ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ದಿನಾಂಕ:20.10.2008ರಂದು ಸಲ್ಲಿಸಿರುವ ಸಮಜಾಯಿಷಿಯಲ್ಲಿ ಶ್ರೀಮತಿ ಲಲಿತಮ್ಮನವರಿಗೆ ಮಂಜೂರಾಗಿದ್ದ ಲೀಸ್ ಭೂಮಿಯನ್ನು ವಶಪಡಿಸಿಕೊಂಡು ಕಾನೂನು ಪ್ರಕಾರ ಕ್ರಮ ಜರುಗಿಸಿದೆ ಇವರ ಪತಿ ಶ್ರೀ ದಾಸನಾಯಕ್ ಇವರಿಗೆ ಯಾವುದೇ ತೊಂದರೆ ನೀಡಿಲ್ಲದಿದ್ದರೂ ದುರುದ್ದೇಶ ಪೂರಕವಾಗಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿರುತ್ತಾರೆ. ಆದುದರಿಂದ ಈ ಪ್ರಕರಣವನ್ನು ವಜಾಗೊಳಿಸಲು ಕ್ರಮವಹಿಸುವಂತೆ ನಿವೇದಿಸಿಕೊಂಡಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಲಾಗಿ, ಶ್ರೀ ಸತೀಶ್ ಬಾಬಾ ರೈ ಇವರ ವಿರುದ್ಧ ಪ್ರಥಮ ದರ್ಜೆ ನ್ಯಾಯಲಯ, ತೀರ್ಥಹಳ್ಳಿ ದಿನಾಂಕ:20.01.2007ರ ಆದೇಶದಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ, ದಿನಾಂಕ:24.05.2007ರಂದು ಹಾಜರಾಗಲು ಸಮನ್ಸ್ ನೀಡಲು ಆದೇಶಿಸಿದೆ. ಈ ಅಧಿಕಾರಿಯನ್ನು ಸ್ವತಂತ್ರ ಪ್ರಭಾರದಲ್ಲಿರಿಸಿದ

ದಿನಾಂಕ:21.06.2007ಕ್ಕೆ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಬಾಕಿ ಇರುತ್ತದೆ. ಆದುದರಿಂದ ಈ ಅಧಿಕಾರಿಯನ್ನು ಸ್ವತಂತ್ರ ಪ್ರಭಾರದಲ್ಲಿರಿಸಿರುವುದನ್ನು ಹಿಂಪಡೆಯಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 200 ಅಇವಿ 2007, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಶ್ರೀ ಸತೀಶ್ ಬಾಬಾ ರೈ ವಲಯ ಅರಣ್ಯಾಧಿಕಾರಿ ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಅಪಜೀ 138 ಅಪಸೇ 2006, ದಿನಾಂಕ:01.06.2007ರ ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿರಿಸಿರುವುದನ್ನು ಈ ಮೂಲಕ ಹಿಂಪಡೆಯಲಾಗಿದೆ.

ಈ ಅಧಿಕಾರಿಯು ಮುಂದಿನ ಸ್ಥಳನಿಯುಕ್ತಿ ಕೋರಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ವರದಿ ಮಾಡಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್.761

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಗುಲ್ಬರ್ಗಾ ವಿಭಾಗದ 5 ಜಿಲ್ಲೆಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರಿಗೆ **"ಸುವರ್ಣ ಆರೋಗ್ಯ ಸುರಕ್ಷಾ"** ಎಂಬ ಒಂದು ಹೊಸ ಆರೋಗ್ಯ ವಿಮೆ ಯೋಜನೆಯನ್ನು ಜಾರಿಗೆ ತರುವ ಬಗ್ಗೆ.

**ಓದಲಾಗಿದೆ:** (1) ದಿನಾಂಕ 29–9–2007 ರಂದು ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಡವಳಿಗಳು.

(2) ಯೋಜನಾ ಆಡಳಿತಾಧಿಕಾರಿ, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಸುಧಾರಣೆ ಯೋಜನೆ ರವರ ಏಕ ಕಡತ ಪದ್ಧತಿಯಡಿ ಸಲ್ಲಿಸಿದ ಪ್ರಸ್ತಾವನೆ ಸಂಖ್ಯೆ: ಹೆಚ್‌ಎಫ್‌ಡಬ್ಲೂ/ ಕೆ.ಹೆಚ್.ಎಸ್.ಡಿ.ಆರ್.ಪಿ/ ಹಚ್.ಐಎನ್‌ಎಸ್/01–08–09 ದಿನಾಂಕ 11–8–2008

(3) ಸಚಿವ ಸಂಪುಟವು ವಿಷಯ ಸಂಖ್ಯೆ:119/2009 ದಿನಾಂಕ 18–2–2009 ರಲ್ಲಿ ನೀಡಿರುವ ಅನುಮೋದನೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಆರೋಗ್ಯ ವಿಮೆ ಜಾರಿಗೊಳಿಸುವ ಪ್ರಸ್ತಾವನೆ ಕೆಲವು ಕಾಲದಿಂದ ಸರ್ಕಾರದ ಪರಿಶೀಲನೆಯಲ್ಲಿದೆ. ರಾಜ್ಯದಲ್ಲಿನ ಬಡತನ ರೇಖೆಗಿಂತ ಕೆಳಗಿರುವವರು ಒಮ್ಮೆಲೆ ದುರಂತ ಉಂಟು ಮಾಡುವ (catastrophic) ಆರೋಗ್ಯ ಆಘಾತಕ್ಕೆ ಒಳಗಾಗುತ್ತಾರೆ. ರಾಜ್ಯದಲ್ಲಿ ಪ್ರಸ್ತುತ ಇರುವ ಆರೋಗ್ಯ ವಿಮೆ ಕಾರ್ಯಕ್ರಮಗಳು ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ತಲುಪುತ್ತಿವೆ. ಕರ್ನಾಟಕದಲ್ಲಿ ಇತರೆ ಇಲಾಖೆಗಳ ಮೂಲಕ ಅಂದರೆ ಸಹಕಾರ ಇಲಾಖೆಯ ಮೂಲಕ ಯಶಸ್ವಿನಿ ಯೋಜನೆ, ಕಾರ್ಮಿಕ ಇಲಾಖೆಯ ಮೂಲಕ ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆ ಮತ್ತು ಕಂದಾಯ ಇಲಾಖೆಯ ಮೂಲಕ ಆಮ್ ಆದ್ಮಿ ಭಿಮಾ ಯೋಜನೆ ಇತ್ಯಾದಿಗಳನ್ನು ಜಾರಿಗೊಳಿಸಲಾಗುತ್ತಿದೆ. ಯಶಸ್ವಿನಿ ಯೋಜನೆಯನ್ನು ವಿಶ್ಲೇಷಿಸಿದಾಗ ತಿಳಿದು ಬರುವುದೇನೆಂದರೆ, ಅದು ಸಹಕಾರಿ ಸಂಘಗಳ ಸದಸ್ಯರಿಗೆ ಮಾತ್ರ ಲಭ್ಯವಿದ್ದು, 1600 ಶಸ್ತ್ರಚಿಕಿತ್ಸೆಗಳ ಒಳಪಡಿಸುವಿಕೆ ಮತ್ತು ಆಯ್ದ ತುರ್ತು ವೈದ್ಯಕೀಯ ಚಿಕಿತ್ಸೆಗಳಿಗೆ ಸೀಮಿತವಾಗಿದೆ. ಯಶಸ್ವಿನಿ ಯೋಜನೆಯಡಿ ಒಂದಾದ ನ್ಯೂನತೆ ಎಂದರೆ ಸಹಕಾರಿ ಸಂಘದ ಸದಸ್ಯರಾಗಿರದಿದ್ದಲ್ಲಿ ಅವರು ಬಡತನ ರೇಖೆಗಿಂತ ಕೆಳಗಿದ್ದರೂ ಸಹ ಹೊರತುಪಡಿಸಲಾಗಿದೆ. ಅದರಡಿ ನಗರ ಪ್ರದೇಶದ ಜನರನ್ನು ಅವರು ಸಹಕಾರಿ ಸಂಘದ ಸದಸ್ಯರಾಗಿದ್ದರೂ ಸಹ ಹೊರತುಪಡಿಸಲಾಗಿದೆ. ಸಹಕಾರಿ ಸಂಘಗಳ ಒಟ್ಟು ಸದಸ್ಯತ್ವದ ಶೇಕಡ 30 ಕ್ಕೂ ಹೆಚ್ಚು ಸದಸ್ಯರನ್ನು ಯಶಸ್ವಿನಿ ಯೋಜನೆಯಲ್ಲಿ ಒಳಪಡಿಸಲಾಗಿಲ್ಲ. ಅದೇ ರೀತಿ ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆ ಹಾಗೂ ಆಮ್ ಆದ್ಮಿ ಭಿಮಾ ಯೋಜನೆಗಳು ತನ್ನದೇ ಆದ ರೂಪು ರೇಷೆಗಳನ್ನು ಹೊಂದಿದ್ದು ಬಡತನ ರೇಖೆಗಿಂತ ಕೆಳಗಿರುವ ಎಲ್ಲರನ್ನೂ ಅವುಗಳಡಿ ಒಳಪಡಿಸಲು ಸಾಧ್ಯವಾಗಿಲ್ಲ.

ಏನತ್ಮಧ್ಯೆ, ಆಂಧ್ರ ಪ್ರದೇಶ ಸರ್ಕಾರವು **"ಆರೋಗ್ಯಶ್ರೀ"** ಎಂಬ ಆರೋಗ್ಯ ವಿಮೆ ಯೋಜನೆಯನ್ನು ಆ ರಾಜ್ಯದಲ್ಲಿ ಬೃಹದಾಕಾರವಾಗಿ ಪ್ರಾರಂಭಿಸಿದೆ. ಈ ಯೋಜನೆಯಡಿ ಒಮ್ಮೆಲೆ ದುರಂತ ಉಂಟು ಮಾಡುವ (catastrophic) ಅನಾರೋಗ್ಯಗಳಿಗೆ ತೃತೀಯ ಹಂತದಲ್ಲಿ (Tertiary level) ಚಿಕಿತ್ಸೆಯನ್ನು ನೀಡಲಾಗುತ್ತಿದೆ. ಆಂಧ್ರ ಪ್ರದೇಶದಲ್ಲಿ ನಾಲ್ಕು ಕೋಟಿ ಜನಸಂಖ್ಯೆಯನ್ನು ಒಳಗೊಂಡಂತೆ ಈ ಯೋಜನೆಯನ್ನು ಜಾರಿಮಾಡಲಾಗಿದೆ. ಭಾರತದಲ್ಲೇ ಇದು ಅತ್ಯಂತ ಹೆಚ್ಚಿನ ಜನಸಂಖ್ಯೆಯನ್ನು ಒಳಗೊಂಡ ಕಾರ್ಯಕ್ರಮವಾಗಿದೆ. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 29/9/2007 ರಂದು ನಡೆದ ಸಭೆಯಲ್ಲಿ ಸುವರ್ಣ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಚರ್ಚಿಸಲಾಗಿತ್ತು. ಆ ಸಭೆಯಲ್ಲಿ, ಇನ್ನಿತರೆ ಅಂಶಗಳನ್ನು ಒಳಗೊಂಡಂತೆ, ಆಂಧ್ರ ಪ್ರದೇಶದ ಆರೋಗ್ಯಶ್ರೀ ಯೋಜನೆಯನ್ನು

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಧ್ಯಯನ ಮಾಡಿ ಅದರಂತೆ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ನಮ್ಮ ರಾಜ್ಯದಲ್ಲಿ ಜಾರಿಗೊಳಿಸಲು ಒಂದು ವಿವರವಾದ ಪ್ರಸ್ತಾವನೆಯನ್ನು ತಯಾರಿಸುವಂತೆ ತೀರ್ಮಾನಿಸಲಾಯಿತು. ಅದರನ್ವಯ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳ ತಂಡವೊಂದು ಆಂಧ್ರ ಪ್ರದೇಶಕ್ಕೆ ಭೇಟಿ ನೀಡಿ ಆರೋಗ್ಯಶ್ರೀ ಯೋಜನೆಯನ್ನು ಅಧ್ಯಯನ ಮಾಡಿದೆ. ಆಂಧ್ರ ಪ್ರದೇಶದ ಆರೋಗ್ಯಶ್ರೀ ಮಾದರಿಯು ಬಹಳ ಪ್ರಯೋಜನಕಾರಿಯಾಗಿದ್ದು, ಬಡತನ ರೇಖೆಗಿಂತ ಕೆಳಗಿರುವ ಜನರ ಆರೋಗ್ಯ ಸ್ಥಾನಮಾನವನ್ನು ಸುಧಾರಿಸುವ ನಿಟ್ಟಿನಲ್ಲಿ ಖಚಿತವಾಗಿಯೂ ಧೀರ್ಘಕಾಲಿಕ ಪರಿಣಾಮವನ್ನು ಅದು ಬೀರುತ್ತದೆ.

ಕರ್ನಾಟಕ ರಾಜ್ಯದಲ್ಲಿಯೂ ಸಹ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ತಮ್ಮ ಆದಾಯದ ಮುಖ್ಯ ಪಾಲನ್ನು ಆರೋಗ್ಯ ಸಮಸ್ಯೆಗಳಿಗೆ ಖರ್ಚು ಮಾಡುತ್ತಾರೆ. ಸರ್ಕಾರಿ ವಲಯದಲ್ಲಿ ಪ್ರಾಥಮಿಕ ಹಾಗೂ ದ್ವಿತೀಯ ಹಂತದ ರಕ್ಷಣೆ ಲಭ್ಯವಿದೆ. ಬೆರಳೆಣಿಸುವ ಕೆಲವು ಸರ್ಕಾರಿ ಆಸ್ಪತ್ರೆಗಳನ್ನು ಬಿಟ್ಟರೆ ಇತರೆ ಸರ್ಕಾರಿ ಆಸ್ಪತ್ರೆಗಳಲ್ಲಿ ಸೂಪರ್ ಸ್ಪೆಷಾಲಿಟಿ ಚಿಕಿತ್ಸೆ ಲಭ್ಯವಿರುವುದಿಲ್ಲ. ಮಾರಣಾಂತಿಕ ಖಾಯಿಲೆಗಳು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಹತ್ತಾರು ವರ್ಷಗಳ ಉಳಿತಾಯವನ್ನು ಅಳಿಸಿಹಾಕುತ್ತವೆ. ಬಡ ಕುಟುಂಬಗಳು ಮಾರಣಾಂತಿಕ ಖಾಯಿಲೆಗಳನ್ನು ಎದುರಿಸಲು ಸಹಾಯ ಮಾಡುವುದು ಸರ್ಕಾರದ ನೈತಿಕ ಹೊಣೆಯಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಈಗ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ವಿವರವಾದ ಆರೋಗ್ಯ ವಿಮಾ ಯೋಜನೆಯನ್ನು ಆಂಧ್ರ ಪ್ರದೇಶದ ಆರೋಗ್ಯಶ್ರೀ ಮಾದರಿಯನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ತಯಾರಿಸಿದೆ. ಸುವರ್ಣಾ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೆ ತರಲು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ರೂ. 25.25 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ. ಆದುದರಿಂದ, ಈಗ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ಪ್ರಮುಖ ಆರೋಗ್ಯ ವಿಮೆ ಯೋಜನೆಯನ್ನು ಬಡತನ ರೇಖೆಗಿಂತ ಕೆಳಗಿರುವ ಕುಟುಂಬದವರಿಗೆ ಚಿಕಿತ್ಸೆಯನ್ನು ನಗದುರಹಿತವಾಗಿ ನೀಡಲು ಪ್ರಸ್ತಾವನೆಯನ್ನು ತಯಾರಿಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿ ಮೇಲೆ ಓದಲಾದ (2) ರ ಕಡತದಲ್ಲಿ ಯೋಜನಾ ಆಡಳಿತಾಧಿಕಾರಿ, ಕರ್ನಾಟಕ ಆರೋಗ್ಯ ಪದ್ದತಿ ಅಭಿವೃದ್ಧಿ ಸುಧಾರಣೆ ಯೋಜನೆ ರವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ದಿನಾಂಕ: 1/11/2008 ರಂದು ಮಾನ್ಯ ಮುಖ್ಯಮಂತ್ರಿಯವರು ಆರೋಗ್ಯ ಕವಚ ಯೋಜನೆಯನ್ನು ಉದ್ಘಾಟನೆ ಮಾಡುವ ಸಂದರ್ಭದಲ್ಲಿ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ರಾಜ್ಯದ ಗುಲ್ಬರ್ಗಾ ವಿಭಾಗದಲ್ಲಿ ಪ್ರಾಯೋಗಿಕವಾಗಿ ಜಾರಿಗೊಳಿಸಲಾಗುವುದು ಎಂಬುದಾಗಿ ಸಹ ಘೋಷಣೆ ಮಾಡಿದ್ದರು. ಅದರಂತೆ ಗುಲ್ಬರ್ಗಾ ವಿಭಾಗದ ಐದು ಜಿಲ್ಲೆಗಳಲ್ಲಿ ಅಂದರೆ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಮತ್ತು ಬಳ್ಳಾರಿಗಳಲ್ಲಿ ಪ್ರಾಯೋಗಿಕವಾಗಿ ಪ್ರಸಕ್ತ ಸಾಲಿನಿಂದ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸುವ ಪ್ರಸ್ತಾವನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಯೋಜನೆ ಮತ್ತು ಆರ್ಥಿಕ ಇಲಾಖೆಗಳ ಸಮಾಲೋಚನೆಯೊಂದಿಗೆ ಪರಿಶೀಲಿಸಿದೆ. ಈ ಕುರಿತು ವಿಷಯವನ್ನು ಸಚಿವ ಸಂಪುಟದ ಅನುಮೋದನೆಗೆ ಸಹ ಮಂಡಿಸಲಾಗಿ ಸಚಿವ ಸಂಪುಟವು ಮೇಲೆ (3 ರಲ್ಲಿ) ಓದಲಾದ ದಿನಾಂಕ: 18/2/2009 ರಂದು ನಡೆದ ಸಭೆಯಲ್ಲಿ ಪ್ರಸ್ತಾವನೆಗೆ ಅನುಮೋದನೆ ನೀಡಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಆಕುಕ 216 ಸಿಜಿಇ 2008, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಗುಲ್ಬರ್ಗಾ ವಿಭಾಗದ ಐದು ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಗಳಲ್ಲಿ ರಾಜ್ಯದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರಿಗೆ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ಹೊಸ ಆರೋಗ್ಯ ವಿಮೆ ಯೋಜನೆಯನ್ನು ತಕ್ಷಣದಿಂದಲೇ ಅನ್ವಯವಾಗುವಂತೆ ಜಾರಿಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

2. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸಲು "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" ಎಂಬ ಹೆಸರಿನ ಒಂದು ಟ್ರಸ್ಟ್‌ನ್ನು ಭಾರತೀಯ ಟ್ರಸ್ಟ್ ಅಧಿನಿಯಮ 1882 ರಡಿ ಕೆಳಕಂಡಂತೆ ರಚಿಸಿ ಅದರ ಮೂಲಕ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಮಾನ್ಯ ಮುಖ್ಯ ಮಂತ್ರಿಗಳು | ಪ್ರಧಾನ ಪೋಷಕರು |
| 2. | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಪೋಷಕರು-1 |
| 3. | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು | ಪೋಷಕರು-2 |
| 4. | ಸರ್ಕಾರದ ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಅಥವ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಿಲ್ಲದ ಅವರ ಪ್ರತಿನಿಧಿ | ಟ್ರಸ್ಟೀ |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಟ್ರಸ್ಟೀ |

| | | |
|---|---|---|
| 7. | ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ | ಟ್ರಸ್ಟೀ |
| 8. | ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | ಟ್ರಸ್ಟೀ |
| 9. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಮುಖ್ಯ ಕಾರ್ಯನಿರ್ವಾಹಕ ಟ್ರಸ್ಟೀ |
| 10. | ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ / ಯೋಜನಾ ನಿರ್ದೇಶಕರು, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಸುಧಾರಣೆ | ಟ್ರಸ್ಟೀ |
| 11. | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಟ್ರಸ್ಟೀ |
| 12. | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ | ಟ್ರಸ್ಟೀ |
| 13. | ಡಾ. ದೇವಿ ಶೆಟ್ಟಿ, ಕಾರ್ಡಿಯೋ ಥೋರಾಸಿಕ್ ಸರ್ಜನ್, ನಾರಾಯಣ ಹೃದಯಾಲಯ, ಬೆಂಗಳೂರು | ಟ್ರಸ್ಟೀ |
| 14. | ಟ್ರಸ್ಟ್ ನ ಕಾರ್ಯ-ನಿರ್ವಾಹಕ ನಿರ್ದೇಶಕರು | ಟ್ರಸ್ಟೀ-ಕಾರ್ಯದರ್ಶಿ |
| 15. | ಡಾ.ಸಿ.ಎನ್. ಮಂಜುನಾಥ್, ನಿರ್ದೇಶಕರು, ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು | ಟ್ರಸ್ಟೀ |
| 16. | ಡಾ. ಡಿ. ನಾಗರಾಜ್, ನಿರ್ದೇಶಕರು, ನಿಮ್ಹಾನ್ಸ್, ಬೆಂಗಳೂರು | ಟ್ರಸ್ಟೀ |
| 17. | ಶ್ರೀ ಮೋಹನ್ ದಾಸ್ ಪೈ, ಇನ್ಫೋಸಿಸ್ ಸಂಸ್ಥೆ, ಬೆಂಗಳೂರು | ಟ್ರಸ್ಟೀ |
| 18. | ಡಾ.ಕೆ.ವಿ.ರಾಜು, ಅರ್ಥಶಾಸ್ತ್ರಜ್ಞರು, ಬೆಂಗಳೂರು | ಟ್ರಸ್ಟೀ |
| 19. | ಡಾ. ಹೆಚ್. ಸುದರ್ಶನ್, ಕರುಣಾ ಟ್ರಸ್ಟ್ | ಟ್ರಸ್ಟೀ |
| 20. | ಡಾ. ಅಶೋಕ್ ಶೆಣೈ, ನಿರ್ದೇಶಕರು, ಕಿದ್ವಾಯ ಕ್ಯಾನ್ಸರ್ ಸಂಸ್ಥೆ, ಬೆಂಗಳೂರು | ಟ್ರಸ್ಟೀ |

ಸದರಿ ಟ್ರಸ್ಟ್ ಆರೋಗ್ಯ, ವಿಮೆ, ಆರ್ಥಿಕ, ರಿಸ್ಕ್ ನಿರ್ವಹಣೆ ಇತ್ಯಾದಿ ಕ್ಷೇತ್ರದಲ್ಲಿರುವ ಪ್ರಮುಖ ವ್ಯಕ್ತಿಗಳನ್ನು ಆಗಿಂದಾಗ್ಯೆ ಆಹ್ವಾನಿಸಬಹುದು. ಅಂತಹ ಆಹ್ವಾನಿತರ ಸಂಖ್ಯೆ ಒಂದು ಸಲಕ್ಕೆ ಐದನ್ನು ಮೀರಬಾರದು.

3. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ನೀತಿ ನಿರ್ಣಯಗಳಿಗೆ ಸಂಬಂಧಿಸಿದ ಎಲ್ಲಾ ತೀರ್ಮಾನಗಳನ್ನು ತೆಗೆದುಕೊಳ್ಳಲು ಸದರಿ ಟ್ರಸ್ಟ್ ಅಧಿಕಾರ ಹೊಂದಿರುತ್ತದೆ ಹಾಗೂ ಸದರಿ ಟ್ರಸ್ಟ್ ಈ ಯೋಜನೆಯ ಒಟ್ಟಾರೆ ಮೇಲ್ವಿಚಾರಣೆ, ನಿಯಂತ್ರಣ ಮತ್ತು ಆಡಳಿತ ಅಧಿಕಾರ ಸಹ ಹೊಂದಿರುತ್ತದೆ. ಸದರಿ ಟ್ರಸ್ಟ್‌ನ ಅಧಿಕಾರ ಮತ್ತು ಜವಾಬ್ದಾರಿ ಈ ದೆಸೆಯಲ್ಲಿ ಪ್ರತ್ಯೇಕವಾಗಿ ನೊಂದಾಯಿಸಲ್ಪಡುವ ಟ್ರಸ್ಟ್ ಡೀಡ್ ನಲ್ಲಿ ನಮೂದಿಸಿರುವ ಪ್ರಕಾರ ಇರತಕ್ಕದ್ದು.

4. ಈ ಯೋಜನೆಯ ದಿನನಿತ್ಯದ ಕಾರ್ಯ ನಿರ್ವಹಣೆಗಾಗಿ ಕೆಳಕಂಡ ಕಾರ್ಯಕಾರಿ ಸಮಿತಿಯನ್ನು ಸಹ ರಚಿಸಲಾಗಿದೆ:-

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಅಥವ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಿಲ್ಲದ ಅವರ ಪ್ರತಿನಿಧಿ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 4. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 5. | ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ / ಯೋಜನಾ ನಿರ್ದೇಶಕರು, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಸುಧಾರಣೆ | ಸದಸ್ಯರು |
| 6. | ಟ್ರಸ್ಟ್ ನ ಕಾರ್ಯ-ನಿರ್ವಾಹಕ ನಿರ್ದೇಶಕರು | ಸದಸ್ಯ-ಕಾರ್ಯದರ್ಶಿ |
| 7. | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 8. | ಡಾ. ಹೆಚ್. ಸುದರ್ಶನ್, ಕರುಣಾ ಟ್ರಸ್ಟ್, | ಸದಸ್ಯರು |
| 9. | ಡಾ. ಕೆ.ವಿ. ರಾಜು, ಅರ್ಥಶಾಸ್ತ್ರಜ್ಞರು, ಬೆಂಗಳೂರು | ಸದಸ್ಯರು |
| 10. | ಶ್ರೀ ಮೋಹನ್ ದಾಸ್ ಪೈ, ಇನ್ಫೋಸಿಸ್ | ಸದಸ್ಯರು |

5. ಕಾರ್ಯಕಾರಿ ಸಮಿತಿಯ ಅಧಿಕಾರ ಮತ್ತು ಜವಾಬ್ದಾರಿ ಕೆಳಕಂಡಂತಿರುತ್ತದೆ.

(1) ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಒಂದು ಅನುಷ್ಠಾನ ಏಜೆನ್ಸಿಯನ್ನು (Implementing Agency) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ಅದರಡಿ ರಚಿಸಲಾದ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡುವುದು.

(2) ಅನುಷ್ಠಾನ ಏಜೆನ್ಸಿಯು ನಿರ್ವಹಿಸುವ ಕಾರ್ಯ ಮತ್ತು ಜವಾಬ್ದಾರಿಯನ್ನು ನಿಗದಿಪಡಿಸಿ ಅದರ ಜೊತೆ ಹಾಗೂ ಜಾಲ ಆಸ್ಪತ್ರೆಗಳ (Network Hospitals) ಜೊತೆ ಸೂಕ್ತ ಒಪ್ಪಂದ ಮಾಡಿಕೊಳ್ಳುವುದು. ಒಟ್ಟಾರೆಯಾಗಿ ಈ ಯೋಜನೆಯನ್ನು ಜಾರಿಗೊಳಿಸಲು ದಿನನಿತ್ಯದ ಆಡಳಿತಕ್ಕೆ ಬೇಕಾದ ಎಲ್ಲಾ ನಿರ್ಣಯಗಳನ್ನು ತೆಗೆದುಕೊಳ್ಳಲು ಕಾರ್ಯಕಾರಿ ಸಮಿತಿಗೆ ಪೂರ್ಣ ಅಧಿಕಾರವಿರುತ್ತದೆ.

(3) ಸದರಿ ಕಾರ್ಯಕಾರಿ ಸಮಿತಿಯ ವಿವರವಾದ ಅಧಿಕಾರ ಮತ್ತು ಜವಾಬ್ದಾರಿ ಈ ದೆಸೆಯಲ್ಲಿ ಪ್ರತ್ಯೇಕವಾಗಿ ನೊಂದಾಯಿಸಲ್ಪಡುವ ಟ್ರಸ್ಟ್ ಡೀಡ್ ನಲ್ಲಿ ನಮೂದಿಸಿರುವ ಪ್ರಕಾರ ಇರತಕ್ಕದ್ದು.

6. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯ ರೂಪುರೇಷೆಗಳು ಕೆಳಕಂಡಂತೆ ಇರತಕ್ಕದ್ದು:–

(1) ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯಡಿಯಲ್ಲಿ ಈ ಕೆಳಕಂಡ ಮಾರಣಾಂತಿಕ ಖಾಯಿಲೆಗಳಿಗೆ ಆಸ್ಪತ್ರೆಗೆ ದಾಖಲಾತಿ, ಶಸ್ತ್ರಚಿಕಿತ್ಸೆ ಹಾಗೂ ಇತರೆ ಚಿಕಿತ್ಸೆಗಳನ್ನು ಗೊತ್ತುಪಡಿಸಿದ ಆರೋಗ್ಯ ಸಂಸ್ಥೆಗಳ ಜಾಲದ ಮೂಲಕ ನೀಡಲಾಗುವುದು.

- ಹೃದ್ರೋಗಗಳು
- ಕ್ಯಾನ್ಸರ್ ಚಿಕಿತ್ಸೆ – ಶಸ್ತ್ರಚಿಕಿತ್ಸೆ / ಕೀಮೋಥೇರಪಿ
- ನರವ್ಯಾಧಿಗಳು
- ಕಿಡ್ನಿ ಖಾಯಿಲೆಗಳು.
- ಸುಟ್ಟ ಪ್ರಕರಣ
- ಬಹು ಅಪಘಾತ ಪ್ರಕರಣಗಳು (ಪಾಲಿಟ್ರಾಮ) (ವಾಹನ ವಿಮೆ ಪ್ರಕರಣಗಳ ಹೊರತಾಗಿ),
- ನಿಯೋನ್ಯಾಟಲ್
- ಈ ಯೋಜನೆಯಡಿ ಒಳಪಡಿಸಲಾಗುವ ಇತರೆ ಚಿಕಿತ್ಸೆ ವಿವರಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

(2) **ಆಸ್ಪತ್ರೆಗಳ ಜಾಲ:** ಕಾರ್ಯಕಾರಿ ಸಮಿತಿ ಗುರುತಿಸಲ್ಪಟ್ಟ ಆಸ್ಪತ್ರೆಗಳ ಜಾಲದ ಮುಖಾಂತರ ಆರೋಗ್ಯ ಚಿಕಿತ್ಸೆ ನೀಡಲಾಗುವುದು. ಐ.ಆರ್.ಡಿ.ಎ. ನೊಂದಣಿವುಳ್ಳ ಅನುಷ್ಠಾನ ಏಜೆನ್ಸಿ ಈ ಯೋಜನೆಯನ್ನು ಕಾರ್ಯಕಾರಿ ಸಮಿತಿ ನಿಗದಿಪಡಿಸಿದ ಜವಾಬ್ದಾರಿ ರೀತಿ ಕಾರ್ಯಗತ ಮಾಡುವ ಜವಾಬ್ದಾರಿ ಹೊಂದಿರುತ್ತದೆ. ಈ ಬಗ್ಗೆ ಒಂದು ಒಪ್ಪಂದವನ್ನು ಆಸ್ಪತ್ರೆಗಳ ಜೊತೆ ಮಾಡಿಕೊಳ್ಳಲಾಗುವುದು. ಸದರಿ ಒಪ್ಪಂದಕ್ಕೆ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಅನುಮೋದನೆ ನೀಡುತ್ತದೆ. ಆ ಒಪ್ಪಂದದಲ್ಲಿ ಕರಾರು ಉಲಂಘನೆಗೆ ದಂಡ ಇತ್ಯಾದಿ ಉಪಬಂಧಗಳನ್ನು ಕಲ್ಪಿಸಲಾಗುವುದು.

(3) **ವ್ಯಾಪ್ತಿ:** ಬಡತನ ರೇಖೆಗಿಂತ ಕೆಳಗಿರುವ ಪ್ರತಿ ಕುಟುಂಬದ ಐವರು ಗರಿಷ್ಠ ಸದಸ್ಯರುಗಳಿಗೆ ಅಂದರೆ ಪತಿ, ಪತ್ನಿ, ಇಬ್ಬರು ಅಥವಾ ಮೂವರು ಅವಲಂಭಿತರುಗಳಿಗೆ ಸೀಮಿತಗೊಳಿಸಿದೆ. ಪ್ರಾರಂಭಿಕವಾಗಿ ಈ ಯೋಜನೆಯನ್ನು ಗುಲ್ಬರ್ಗಾ ವಿಭಾಗದಲ್ಲಿನ ಜಿಲ್ಲೆಗಳು ಅಂದರೆ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿಗಳಲ್ಲಿ ಜಾರಿಗೊಳಿಸಲಾಗುವುದು. ತದನಂತರ ಹಂತಹಂತವಾಗಿ ರಾಜ್ಯಾದ್ಯಾಂತ ವಿಸ್ತರಿಸಲಾಗುವುದು.

(4) **ಫಲಾನುಭವಿಗಳ ಗುರುತಿಸುವಿಕೆ:** ಕರ್ನಾಟಕ ಸರ್ಕಾರದ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರು ಬಿ.ಪಿ.ಎಲ್ ಕಾರ್ಡ್ ಹೊಂದಿರುವಂತಹವರು ಈ ಯೋಜನೆಯಡಿ ಲಾಭ ಪಡೆಯಲು ಅರ್ಹತೆಯುಳ್ಳವರಾಗಿರುತ್ತಾರೆ. ಸದರಿ ಬಿ.ಪಿ.ಎಲ್ ಕಾರ್ಡಿನಲ್ಲಿ ನಮೂದಿಸಿರುವ ಹೆಸರು / ಭಾವಚಿತ್ರದ ಪ್ರಕಾರ ಪ್ರತಿ ಕುಟುಂಬಕ್ಕೆ ಗರಿಷ್ಠ ಐದು ಜನರು ಈ ಯೋಜನೆಯ ಲಾಭವನ್ನು family floater ಆಧಾರದ ಮೇಲೆ ಪಡೆಯಬಹುದು. ಕಾಲಕ್ರಮೇಣದಲ್ಲಿ ಫಲಾನುಭವಿಗಳಿಗೆ ಈ ಯೋಜನೆಯಡಿ ಬಯೋ–ಮೆಟ್ರಕ್ ಕಾರ್ಡ್‌ಗಳನ್ನು ನೀಡಲಾಗುವುದು.

(5) **ವಿಮೆ ವಂತಿಕೆ ಮತ್ತು ವಿಮೆಯ ಅವಧಿ:** ಪ್ರತಿ ಕುಟುಂಬ ಐದು ಸದಸ್ಯರಿಗೆ ಪ್ರತಿ ವರ್ಷಕ್ಕೆ ಅಂದಾಜು ರೂ. 300 ರಂತೆ ಫಲಾನುಭವಿಗಳ ವಂತಿಕೆಯಾಗಿ ಸರ್ಕಾರವು ಆರೋಗ್ಯ ಸುವರ್ಣ ಸುರಕ್ಷಾ ಯೋಜನೆಯನ್ನು ಅನುಷ್ಠಾನಗೊಳಿಸುವ ಟ್ರಸ್ಟ್‌ಗೆ ಎರಡು ಕಂತುಗಳಲ್ಲಿ ನೇರವಾಗಿ ಪಾವತಿಸಲಿದೆ.

ಫಲಾನುಭವಿಗಳು ಯಾವುದೇ ವಂತಿಕೆ ಹಣವನ್ನು ನೀಡಬೇಕಾಗಿಲ್ಲ. ಈ ಯೋಜನೆಯಡಿ ನೀಡಲಾಗುವ ವಿಮೆ ಪಾಲಿಸಿಯು ವಿಮೆ ಪಾಲಿಸಿಯನ್ನು ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಜಾರಿಯಲ್ಲಿರುತ್ತದೆ.

(6) **ವಿಮೆ ಲಾಭದ ಗಂಟು (ಬೆನಿಫಿಟ್ ಪ್ಯಾಕೇಜ್):** ವಿಮೆ ಲಾಭದ ಗಂಟು ತೃತೀಯ ಹಂತದ ಈ ಯೋಜನೆಯಡಿ ಗುರುತಿಸಲ್ಪಟ್ಟ ಮಾರಣಾಂತಿಕ ಕಾಯಿಲೆಗಳ ಚಿಕಿತ್ಸೆಯನ್ನು ಪಡೆಯಲು ಒಳಗೊಂಡಿರುತ್ತದೆ. ವಾಗ್ದಾನದ ವಿಮೆ ಮೊತ್ತ ಕುಟುಂಬವೊಂದಕ್ಕೆ ವಾರ್ಷಿಕ ಗರಿಷ್ಠ ರೂ.1,50,000/–ರಂತೆ (ಫ್ಯಾಮಿಲಿ ಫ್ಲೋಟರ್ ಆಧಾರದ ಮೇಲೆ) ನಿಗಧಿಪಡಿಸಲಾಗಿದೆ. ಸದರಿ ಗರಿಷ್ಠ ಮೊತ್ತ ಮೀರಿದಲ್ಲಿ ಪ್ರತಿ ವರ್ಷ ರೂ.50,000/– ರಂತೆ ಹೆಚ್ಚುವರಿ ವಿಮೆ ಮೊತ್ತವನ್ನು ಒದಗಿಸಲಾಗುವುದು ಹಾಗೂ ಇದು ಇಡೀ ಕುಟುಂಬಕ್ಕೆ ಪ್ರಕರಣದಿಂದ ಪ್ರಕರಣಕ್ಕೆ ಅವಲಂಭಿತವಾಗಿದೆ.

(7) **ಫ್ಲೋಟರ್ ಆಧಾರದ ಮೇಲೆ ವಿಮೆ ಮೊತ್ತ:** ಈ ಯೋಜನೆಯಡಿ, ಆಸ್ಪತ್ರೆ ದಾಖಲಾತಿ, ವೈದ್ಯಕೀಯ, ಶಸ್ತ್ರಚಿಕಿತ್ಸಾ ಪ್ರೊಸಿಜರ್‌ಗಳು ಮತ್ತು ಕೀಮೋಥೆರಪಿ ಪ್ರೊಸಿಜರ್‌ಗಳಿಗೆ ತಗಲುವ ವೆಚ್ಚಕ್ಕೆ ಚಿಕಿತ್ಸೆಯನ್ನು ಫಲಾನುಭವಿಯು ಪಡೆಯಬಹುದಾಗಿದೆ. ಫಲಾನುಭವಿಯ ಕುಟುಂಬವೊಂದಕ್ಕೆ ವಾರ್ಷಿಕ ಗರಿಷ್ಠ ರೂ.1,50,000/–ರಂತೆ (ಫ್ಯಾಮಿಲಿ ಫ್ಲೋಟರ್ ಆಧಾರದ ಮೇಲೆ) ಹಾಗೂ ಸದರಿ ಗರಿಷ್ಠ ಮೊತ್ತವು ಮೀರಿದಲ್ಲಿ ಪ್ರತಿ ವರ್ಷ ರೂ.50,000/– ರಂತೆ ಹೆಚ್ಚುವರಿ ಮೊತ್ತಕ್ಕೆ ಸಮನಾಗಿ (ಅಂದರೆ ಇಡೀ ಕುಟುಂಬಕ್ಕೆ ಪ್ರಕರಣದಿಂದ ಪ್ರಕರಣಕ್ಕೆ ಅವಲಂಭಿಸಿದೆ) ಜಾಲದ ಆಸ್ಪತ್ರೆ ಮೂಲಕ ಚಿಕಿತ್ಸೆ ಪಡೆಯಬಹುದಾಗಿದೆ. ಫ್ಯಾಮಿಲಿ ಫ್ಲೋಟರ್ ಆಧಾರದ ಮೇಲೆ ದೊರಕುವ ಸದರಿ ಸೌಲಭ್ಯವನ್ನು ಅಂದರೆ ಒಟ್ಟಾರೆ ರೂ.1,50,000/– ಮೊತ್ತಕ್ಕೆ ಸಮನಾಗಿ ಕುಟುಂಬದ ಒಬ್ಬ ಸದಸ್ಯ ಅಥವಾ ಕುಟುಂಬದ ಸದಸ್ಯರು ಒಟ್ಟಾರೆಯಾಗಿ ಉಪಯೋಗಿಸಿಕೊಳ್ಳಬಹುದಾಗಿದೆ.

(8) **ನಗದು ರಹಿತ ವ್ಯವಹಾರ:** ಈ ಯೋಜನೆಯಡಿ ಆಸ್ಪತ್ರೆಯಲ್ಲಿ ದಾಖಲಾಗುವ ರೋಗಿಯ ಚಿಕಿತ್ಸೆಗೆ ಸಂಬಂಧಪಟ್ಟಂತೆ ವ್ಯವಹಾರವು ಸಂಪೂರ್ಣವಾಗಿ ನಗದುರಹಿತವಾಗಿರುತ್ತದೆ. ಅಂದರೆ ಒಬ್ಬ ಫಲಾನುಭವಿಯು ಗುರುತಿಸಲ್ಪಟ್ಟ ಜಾಲದ ಆಸ್ಪತ್ರೆಗೆ ಚಿಕಿತ್ಸೆಗಾಗಿ ದಾಖಲಾಗಿ ಸೇರಿದಂದಿನಿಂದ ಚಿಕಿತ್ಸೆ ಪಡೆದು ಹೊರ ಬರುವ ತನಕವು ಯಾವುದೇ ಹಣವನ್ನು ಪಾವತಿಸಬೇಕಾಗಿಲ್ಲ.

(9) **ಪಾಲಿಸಿ ಪೂರ್ವ ಇದ್ದಂತಹ ಖಾಯಿಲೆಗಳ ಕುರಿತು:** ಒಬ್ಬ ಪಾಲಿಸಿದಾರನು ಯಾವುದೇ ಗುರುತಿಸಲ್ಪಟ್ಟ ಖಾಯಿಲೆಯಿಂದ ಪಾಲಿಸಿ ಪಡೆಯು ಪೂರ್ವ–ನಿಗದಿತವಾಗಿ ನರಳುತ್ತಿದ್ದಲ್ಲಿ ಆ ಖಾಯಿಲೆಗಳಿಗೂ ಸಹ ಈ ಯೋಜನೆಯು ಅನ್ವಯಿಸುತ್ತದೆ.

(10) **ಆಸ್ಪತ್ರೆಗೆ ದಾಖಲಾದ ಮತ್ತು ನಂತರದ ಚಿಕಿತ್ಸಾ ಅವಧಿ:** ಫಲಾನುಭವಿಯು ಚಿಕಿತ್ಸೆಗಾಗಿ ಆಸ್ಪತ್ರೆಗೆ ದಾಖಲಾದ ದಿನಾಂಕದಿಂದ ಹಾಗೂ ಆಸ್ಪತ್ರೆಯಿಂದ ಬಿಡುಗಡೆಯಾದ ಹತ್ತು ದಿನಗಳೊಳಗೆ ಯಾವುದೇ ಚಿಕಿತ್ಸಾ ನಂತರದ ತೊಂದರೆಗೊಳಗಾದಲ್ಲಿ ನಗದುರಹಿತವಾಗಿ ಈ ಯೋಜನೆಯಡಿ ಒದಗಿಸಿರುವ ಪ್ಯಾಕೇಜಿನ ಅನ್ವಯ ಪೂರ್ಣ ಮೊಬಲಿಗೆ ಚಿಕಿತ್ಸೆಯನ್ನು ಪಡೆಯಲು ಅರ್ಹರಿರುತ್ತಾನೆ.

(11) **ಈ ಯೋಜನೆಯಡಿ ಆಸ್ಪತ್ರೆಗಳನ್ನು ನೊಂದಾಯಿಸುವುದು:** ಎಲ್ಲಾ ಸಾರ್ವಜನಿಕ ಆಸ್ಪತ್ರೆಗಳು (ಜಿಲ್ಲಾ ಆಸ್ಪತ್ರೆಗಳು, ಸರ್ಕಾರಿ / ಖಾಸಗಿ ವೈದ್ಯಕೀಯ ಕಾಲೇಜುಗಳು) ಮತ್ತು ಗುರುತಿಸಲ್ಪಟ್ಟ ಖಾಸಗಿ ಆಸ್ಪತ್ರೆಗಳು / ನರ್ಸಿಂಗ್ ಹೋಂಗಳನ್ನು ಪ್ರತ್ಯೇಕವಾಗಿ ಈ ಯೋಜನೆಯಡಿ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಪಟ್ಟಿ ಮಾಡುವುದು. ಖಾಸಗಿ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಂಗಳು ಎಂದರೆ ಕನಿಷ್ಠ ಮಾನದಂಡಗಳನ್ನು ಹೊಂದಿರುವಂತಹ ಕರ್ನಾಟಕದಲ್ಲಿ ಒಳರೋಗಿ ಶಸ್ತ್ರಚಿಕಿತ್ಸೆಗಾಗಿ ಸ್ಥಾಪಿಸಲ್ಪಟ್ಟ ಯಾವುದೇ ಸಂಸ್ಥೆ ಮತ್ತು ಜಾಲದ ಆಸ್ಪತ್ರೆ ಆಗಿರುತ್ತದೆ. ಸೂಪರ್ ಸ್ಪೆಷಾಲಿಟಿ ಚಿಕಿತ್ಸೆಗಳಾದ ನರರೋಗ, ಹೃದಯ, ಕ್ಯಾನ್ಸರ್ (ಶಸ್ತ್ರಚಿಕಿತ್ಸೆ, ಕಿಮೋಥೆರಪಿ, ರೇಡಿಯೋಥೆರಪಿ), ಮೂತ್ರಪಿಂಡ ತೊಂದರೆ, ಸುಟ್ಟ ಗಾಯಗಳು ಮತ್ತು ಮೋಟಾರು ವಾಹನ ಅಧಿನಿಯಮದಡಿ ಒಳಗೊಳ್ಳದ ಪಾಲಿ–ಟ್ರಾಮ, ಚಿಕಿತ್ಸೆ ನೀಡಲು ಆಸ್ಪತ್ರೆಗಳು ನಿಗದಿತ ಮೂಲಸೌಲಭ್ಯ ಹಾಗೂ ತಜ್ಞ ವೈದ್ಯರನ್ನು ಹೊಂದಿರಬೇಕು ಹಾಗೂ ಸದರಿ ಆಸ್ಪತ್ರೆಗಳು ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಈ ಯೋಜನೆಯಡಿ ನಿಗದಿಪಡಿಸಿರುವ ಸೌಲಭ್ಯಗಳನ್ನು ಒದಗಿಸುವಂತಿರಬೇಕು.

(12) **ಯೋಜನೆ ಜಾರಿಗೊಳಿಸುವ ಏಜೆನ್ಸಿಗಳ ಜೊತೆ ಒಪ್ಪಂದ:** ಆರೋಗ್ಯ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಆರೋಗ್ಯ ವಿಮೆ ಯೋಜನೆಯನ್ನು ಜಾರಿಗೊಳಿಸಲು ಒಂದು ಅನುಷ್ಠಾನ ಏಜೆನ್ಸಿ ಜೊತೆ ಒಪ್ಪಂದ ಮಾಡಿಕೊಳ್ಳುತ್ತದೆ. ಸದರಿ ಏಜೆನ್ಸಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ಅದರಡಿ ರಚಿಸಲಾಗಿರುವ ನಿಯಮಗಳನ್ನು ಅನುಸರಿಸಿ ಸುವರ್ಣ

ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಆಯ್ಕೆ ಮಾಡುತ್ತದೆ ಹಾಗೂ ಆ ಏಜೆನ್ಸಿ ಐ.ಆರ್.ಡಿ.ಎ. ನೊಂದಣಿ ಹೊಂದಿರುವುದು ಅವಶ್ಯಕ. ಈ ಏಜೆನ್ಸಿ ಜೊತೆ ನಿರ್ಧಿಷ್ಟವಾಗಿ ಒಪ್ಪಂದ ಮಾಡಿಕೊಳ್ಳುವಂತಹ ಚಟುವಟಿಕೆಗಳು ಅಂದರೆ, ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು, ಆಸ್ಪತ್ರೆಗಳ ಜಾಲ ಮತ್ತು ಸೇವೆ ಒದಗಿಸುವವರನ್ನು ಗುರುತಿಸುವುದು, ಹಣ ಪಾವತಿಸುವಿಕೆ ಕುರಿತ ರೂಪುರೇಷೆಗಳ ತಯಾರಿಕೆ, ಆರೋಗ್ಯ ಮಿತ್ರದಲ್ಲಿರುವಂತೆ ರೋಗಿಗಳ ನೆರವಿಗಾಗಿ ವಿಮೆ, ಸಮನ್ವಯಾಧಿಕಾರಿಗಳ ತರಬೇತಿ ಮತ್ತು ಸ್ಥಳನಿಯುಕ್ತಿ, ಆರೋಗ್ಯ ಮೇಳಗಳನ್ನು ನಡೆಸುವುದು, ಕಾಲ್ ಸೆಂಟರ್‌ಗಳ ಸ್ಥಾಪನೆ ಮತ್ತು ಸ್ವೀಕೃತ ಕ್ಲೈಮ್‌ಗಳ ಪಾವತಿ ಕುರಿತಂತೆ ನಿರ್ವಹಣೆ ಹಾಗೂ ಸೇವೆ ನೀಡುವವರ ಮೇಲ್ವಿಚಾರಣೆ ಇತ್ಯಾದಿ ಒಳಗೊಂಡಿರುತ್ತದೆ. ಸದರಿ ಅನುಷ್ಠಾನ ಏಜೆನ್ಸಿ ನಿರ್ವಹಿಸಬೇಕಾದ ವಿವರಗಳನ್ನು ಒಪ್ಪಂದದಲ್ಲಿ ನಮೂದಿಸಲಾಗುವುದು. ಆದರೆ, ಫಲಾನುಭವಿಗಳ ನೊಂದಣಿ ಮತ್ತು ವಿಮೆ ಮಾರ್ಪಾಡು (Insurance underwriting) ಈ ಚಟುವಟಿಕೆಗಳನ್ನು ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ನಿರ್ವಹಿಸುತ್ತದೆ ಹಾಗೂ ಈ ಕಾರ್ಯವನ್ನು ಯಾವುದೇ ಕಾರಣಕ್ಕೂ ಅನುಷ್ಠಾನ ಏಜೆನ್ಸಿ ನಿರ್ವಹಿಸುವಂತಿಲ್ಲ. ಅನುಷ್ಠಾನ ಏಜೆನ್ಸಿ ಕುರಿತ ಒಪ್ಪಂದವನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಡನೆ ಅಂತಿಮಗೊಳಿಸಲಾಗುವುದು.

(13) **ಕ್ಲೈಮುಗಳ ಇತ್ಯರ್ಥಪಡಿಸುವಿಕೆ:** ಆಸ್ಪತ್ರೆಗಳ ಕ್ಲೈಮುಗಳನ್ನು ಅನುಷ್ಠಾನ ಏಜೆನ್ಸಿಯು ಪರಿಶೀಲಿಸಿ ಸಲ್ಲಿಸಿದ ನಂತರ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿಯು ಸಮೀಕ್ಷಿಸಿ ಏಳು ದಿನಗಳ ಒಳಗೆ ಇತ್ಯರ್ಥಪಡಿಸಲಿದೆ.

(14) **ಆರೋಗ್ಯ ಮೇಳಗಳು:** ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕುಗಳಲ್ಲಿ ಜಾಲ ಆಸ್ಪತ್ರೆಗಳು ಕನಿಷ್ಠ ನಿಗದಿತ ಸಂಖ್ಯೆಯ ಆರೋಗ್ಯ ಮೇಳಗಳನ್ನು ಪ್ರತಿ ವರ್ಷ ನಡೆಸಲೇಬೇಕು. ಕಾರ್ಯಕಾರಿ ಸಮಿತಿ ಸಲಹೆ ಮಾಡುವಂತೆ ನಿಗದಿತ ಸ್ಥಳಗಳಲ್ಲಿ, ನಿಯತಕಾಲಿಕೆಯಲ್ಲಿ, ಹಾಗೂ ಅವಶ್ಯಕ ಸಲಕರಕಣೆಗಳು, ತಜ್ಞರು ಮತ್ತು ಅರೆ ವೈದ್ಯಕೀಯ ಸಿಬ್ಬಂದಿಯೊಂದಿಗೆ ಜಾಲ ಆಸ್ಪತ್ರೆಗಳು ಆರೋಗ್ಯ ಮೇಳಗಳನ್ನು ನಡೆಸುವುದು. ಅವರುಗಳು ಜಿಲ್ಲಾ ಸಮನ್ವಯಾಧಿಕಾರಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಜೊತೆ ಸಮನ್ವಯ ಮಾಡಿ ಹಾಗೂ ಜಿಲ್ಲಾ ಜಿಲ್ಲಾಧಿಕಾರಿಗಳನ್ನು ಮತ್ತು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ಸಮಾಲೋಚಿಸಿ ಈ ಬಗ್ಗೆ ಕಾರ್ಯನಿರ್ವಹಿಸಬೇಕು.

(15) **ವೈದ್ಯಕೀಯ ಲೆಕ್ಕಪರಿಶೋಧಕರ ನೇಮಕ:** ಅನುಷ್ಠಾನ ಏಜೆನ್ಸಿಯು ಪ್ರಿ-ಆಥರೈಸೇಷನ್ ಸಲುವಾಗಿ ಸಾಕಷ್ಟು ಸಂಖ್ಯೆಯ ವೈದ್ಯಾಧಿಕಾರಿಗಳನ್ನು ಸ್ಥಾನಿಕರಿಸಬೇಕು ಹಾಗೂ ಆಸ್ಪತ್ರೆಗಳ ನಿಯತಕಾಲಿಕ ತಪಾಸಣೆ, ಫಲಾನುಭವಿಗಳಿಂದ ಅಥವ ಆರೋಗ್ಯ ಮಿತ್ರಗಳ ಮೂಲಕ ಸ್ವೀಕರಿಸುವ ದೂರುಗಳು, ಆಸ್ಪತ್ರೆಗಳ ಸೇವೆಯಲ್ಲಿ ಕೊರತೆ ಇತ್ಯಾದಿಗಳನ್ನು ನೋಡಿಕೊಳ್ಳಲು ಮತ್ತು ರೋಗಿಗಳಿಗೆ ಅಗತ್ಯವಿರುವ ಸಲಹೆಯನ್ನು ನೀಡಿ ಜಾಲ ಆಸ್ಪತ್ರೆ ಹಾಗೂ ಆರೋಗ್ಯ ಮಿತ್ರಗಳ ನಡುವೆ ಸಮನ್ವಯ ಮಾಡಲು ತಜ್ಞವೈದ್ಯರನ್ನು ಸಹ ನೇಮಿಸಬೇಕು.

(16) **ಸಾರ್ವಜನಿಕ ದೂರು ನಿವಾರಣೆ ಕೋಶ:** ಸಾರ್ವಜನಿಕರಿಂದ ಸ್ವೀಕರಿಸಲ್ಪಡುವ ದೂರು / ಸಲಹೆ ಮತ್ತು ಅಹವಾಲುಗಳನ್ನು ಇತ್ಯರ್ಥಪಡಿಸಲು ಸುವರ್ಣ ಆರೋಗ್ಯ ಕಾರ್ಯಕಾರಿ ಸಮಿತಿ ಜಿಲ್ಲಾ ಮತ್ತು ರಾಜ್ಯ ಮಟ್ಟಗಳಲ್ಲಿ ಸಾರ್ವಜನಿಕ ದೂರು ನಿವಾರಣೆ ಕೋಶಗಳನ್ನು ಸ್ಥಾಪಿಸಲಿದೆ.

7. ಯಶಸ್ವಿನಿ ಮತ್ತು ರಾಷ್ಟ್ರೀಯ ಸ್ವಸ್ಥ ಭೀಮಾ ಯೋಜನೆಗಳನ್ನು ಜಾರಿಗೊಳಿಸುತ್ತಿರುವ ಏಜೆನ್ಸಿಗಳು ಆರೋಗ್ಯ ಸುರಕ್ಷಾ ಯೋಜನೆಯಡಿಯ ಫಲಾನುಭವಿಗಳನ್ನು ತಮ್ಮ ಯೋಜನೆಗಳಡಿ ಒಳಪಡಿಸಬಾರದು.

8. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಿಲ್ಲಾ ಮಟ್ಟಗಳಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸುವ ಕುರಿತು ಅವಶ್ಯಕ ಮೇಲ್ವಿಚಾರಣೆ ಮಾಡಲು ಜಿಲ್ಲಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡ ಸಮಿತಿ ರಚಿಸಲಾಗಿದೆ:

| | |
|---|---|
| 1. ಜಿಲ್ಲಾ ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 3. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯ-ಕಾರ್ಯದರ್ಶಿ |
| 4. ಜಿಲ್ಲಾ ಸರ್ಜನ್ | ಸದಸ್ಯರು |
| 5. ಒಬ್ಬರು ಸ್ಥಳೀಯ ಹಿರಿಯ ತಜ್ಞವೈದ್ಯರು (ಜಿಲ್ಲಾಧಿಕಾರಿಯವರು ನಾಮನಿರ್ದೇಶಿಸುವ) | ಸದಸ್ಯರು |

ಸದರಿ ಜಿಲ್ಲಾ ಸಮಿತಿಯು ಅನುಷ್ಠಾನ ಏಜೆನ್ಸಿ ಹಾಗೂ ಜಾಲ ಆಸ್ಪತ್ರೆಗಳ ನಡುವೆ ಸೂಕ್ತ ಸಮನ್ವಯ ಮಾಡಿ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆ ಪರಿಣಾಮಕಾರಿಯಾಗಿ ಜಾರಿಯಾಗುತ್ತಿರುವುದನ್ನು ಖಾತ್ರಿಪಡಿಸಿಕೊಳ್ಳಬೇಕು ಹಾಗೂ ನಿಯತಕಾಲಿಕವಾಗಿ ಪ್ರಗತಿ ಪರಿಶೀಲನಾ ವರದಿಯನ್ನು ಕಳುಹಿಸಬೇಕು.

9. ಸುವರ್ಣ ಸುರಕ್ಷಾ ಟ್ರಸ್ಟ್‌ಗೆ ಕಾರ್ಯನಿರ್ವಹಣೆ ಬಂಡವಾಳವಾಗಿ ರೂ.20 ಕೋಟಿಗಳನ್ನು (ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ) ಅನ್ನು ಬಿಡುಗಡೆ ಮಾಡಲು ಹಾಗೂ ಪ್ರಸಕ್ತ ಸಾಲಿನಲ್ಲಿ ರೂ 10 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಸಂಬಂಧ ತಗಲುವ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ ಸಂಖ್ಯೆ ಸುವರ್ಣ ಸುರಕ್ಷಾ (ಆಪತ್‌ಬಾಂಧವ) 2210–06–800–0–15 ಯೋಜನೆ ರಡಿ ಒದಗಿಸಿರುವ ರೂ.25.25 ಕೋಟಿಗಳ ಪೈಕಿ ಭರಿಸುವುದು.

10. ಈ ಆದೇಶವನ್ನು ಯೋಜನಾ ಮತ್ತು ಆರ್ಥಿಕ ಇಲಾಖೆಗಳ ಸಹಮತಿಯನ್ನು ಕ್ರಮವಾಗಿ ಅ.ಟಿ.ಸಂಖ್ಯೆ: ಪಿಡಿ 90 ಎಂಇ 2008 ದಿನಾಂಕ 7–9–2008 ಆಇ 2219 ವೆಚ್ಚ–5/2008 ದಿನಾಂಕ 26–12–2008 ರಲ್ಲಿ ಪಡೆದು ಹಾಗೂ ಸಚಿವ ಸಂಪುಟದ ಅನುಮೋದನೆಯನ್ನು ವಿಷಯ ಸಂಖ್ಯೆ:ಸಿ/119/2009 ದಿನಾಂಕ 18–2–2009 ರಂದು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 762

**ಎಂ. ಮದನ ಗೋಪಾಲ್**

ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಸಿ. ಮುದೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಅವರ ವಿರುದ್ಧ ಇಲಾಖೆ ವಿಚಾರಣಾ ಮಂಡನಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:**1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 05, ದಿನಾಂಕ:08.06.2007.
2) ಸರ್ಕಾರದ ಆದೇಶ ಸಂಖ್ಯೆ: 51 ಎಸ್‌ಇಎನ್ 05, ದಿನಾಂಕ:22.09.2008.
3) ಶ್ರೀ ಎಸ್.ಪಿ. ಪಾಲಯ್ಯ, ನಿಬಂಧಕರು ಇವರ ಮನವಿ ದಿನಾಂಕ:02.12.2008.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಮುದೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಅವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಸಿದ್ಧಪಡಿಸದೇ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ನೀಡಿ, ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅರಿಯದೇ ಪೂರ್ಣ ಹಣವನ್ನು ಪಾವತಿ ಮಾಡಿದ್ದು, ಆಲಮ್ ಕೂರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಪಾರದರ್ಶಕತೆ ಕಾಯಿದೆಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಿಗಳಿಗಾಗಿ ಶ್ರೀ ಬಿ.ಸಿ. ಮುದೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11–ಎ, ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:08.06.2007ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ಮತ್ತು ಶ್ರೀಮತಿ ಹೇಮಲತಾ, ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಶ್ರೀಮತಿ ಹೇಮಲತಾ ಇವರು ಮನವಿ ಸಲ್ಲಿಸಿ, ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ ಕಾರಣ ಈ ಪ್ರಕರಣದ ಮಂಡನಾಧಿಕಾರಿ ಜವಾಬ್ದಾರಿಯಿಂದ ಬಿಡುಗಡೆಗೊಳಿಸುವಂತೆ ಕೋರಿರುವ ಹಿನ್ನಲೆಯಲ್ಲಿ ದಿನಾಂಕ:22.09.2008ರಂದು ಶ್ರೀ ಪಾಲಯ್ಯ, ನಿಬಂಧಕರು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಓದಲಾದ ಕ್ರಮಸಂಖ್ಯೆ (3)ರಲ್ಲಿ ಶ್ರೀ ಪಾಲಯ್ಯ ಇವರು ದಿನಾಂಕ:02.12.2008ರಂದು ಮನವಿ ಸಲ್ಲಿಸಿ ಅತಿಯಾದ ಕೆಲಸದ ಒತ್ತಡದಿಂದಾಗಿ ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ, ಮಂಡನಾಧಿಕಾರಿಯಾಗಿ ತಾಂತ್ರಿಕವಾಗಿ ಸಮರ್ಥರಿರುವ ಅಧಿಕಾರಿಯನ್ನು ನೇಮಕ ಮಾಡಿಕೊಳ್ಳುವಂತೆ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 2005, ಬೆಂಗಳೂರು, ದಿನಾಂಕ:27ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 2005, ದಿನಾಂಕ:22.09.2008ನ್ನು ಭಾಗಶಃ ಮಾರ್ಪಡಿಸಿ, ಶ್ರೀ ಪಾಲಯ್ಯ, ನಿಬಂಧಕರು ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರ ಸ್ಥಾನದಲ್ಲಿ ಶ್ರೀ ಕೆ.ಆರ್. ಶ್ರೀನಿವಾಸ್ ರಂಗನ್, ಕಾರ್ಯಪಾಲಕ ಇಂಜಿನಿಯರ್,

ಕೃಷ್ಣಾ ಗೋದಾವರಿ ಘಟಕ ಅಂತರ ರಾಜ್ಯ ಜಲ, ಜಲಸಂಪನ್ಮೂಲ ಸಂಸ್ಥೆ, ಬೆಂಗಳೂರು ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ಮೇಲ್ಮನವಿ, ವರ್ಗೀಕರಣ ಮತ್ತು ನಿಯಂತ್ರಣ) ನಿಯಮ 11(15)(ಸಿ) ಅನ್ವಯ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್.796

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮುಖ್ಯ ಮಂತ್ರಿಗಳು/ ಸಚಿವರ ಕಛೇರಿಗಳಿಗೆ ಅಳವಡಿಸಲು ಹೊಸ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1) ತೋಟಗಾರಿಕೆ ಮತ್ತು ಬಂದಿಖಾನೆ ಸಚಿವರ ವಿಶೇಷ ಕರ್ತವ್ಯಾಧಿಕಾರಿಗಳ ಟಿಪ್ಪಣಿ ಸಂಖ್ಯೆ: ತೋಬಂಸ/30/ವಿಕ/2008, ದಿನಾಂಕ:16.09.2008.
2) ಮಾನ್ಯ ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿಗಳ ಟಿಪ್ಪಣಿ ಸಂಖ್ಯೆ:ವಿಕ:501/2008, ದಿನಾಂಕ:10.10.2008.
3) ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ–3 ರವರ ಟಿಪ್ಪಣಿ ಸಂಖ್ಯೆ: ಸಿಎ–210/ಓಎಸ್‌ಡಿ/2008 ದಿನಾಂಕ:06.10.2008.
4) ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿಗಳ ಆಪ್ತ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ: ಸಿಎಂ–123/ಓಎಸ್‌ಡಿ/2008 ದಿನಾಂಕ:22.11.2008.
5) ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ:ಮುಮವಿಕ/ಕಛೇರಿ/2008–09/2 ದಿನಾಂಕ:12.11.2008.
6) ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿಯವರ ಟಿಪ್ಪಣಿ ಸಂಖ್ಯೆ: ಮುಮವಿಕ 673/08 ದಿನಾಂಕ:15.11.2008.
7) ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 467 ಡಿಟಿಎನ್ 2008 ದಿನಾಂಕ:09.01.2009.
8) ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 467 ಡಿಟಿಎನ್ 2008 ದಿನಾಂಕ:12.02.2009.
9) ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯ ಬಿಲ್ ಸಂಖ್ಯೆ:617 ದಿನಾಂಕ:18.02.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ರಿಂದ (6) ರಲ್ಲಿನ ಟಿಪ್ಪಣಿಗಳಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದ ಅಧಿಕಾರಿಗಳು ಮತ್ತು ತೋಟಗಾರಿಕೆ ಸಚಿವರ ಕಛೇರಿಗಳಿಗೆ ಹೊಸ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸುವಂತೆ ಸಂಬಂಧಪಟ್ಟ ಅಧಿಕಾರಿಗಳು ಕೋರಿಕೆ ಸಲ್ಲಿಸಿದ್ದರು. ಮುಖ್ಯ ಮಂತ್ರಿಗಳು ಮತ್ತು ಸಚಿವರ ಕಛೇರಿಗಳಿಗೆ ಅಳವಡಿಸಲು ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಆರು ಫ್ಯಾಕ್ಸ್ ಯಂತ್ರಗಳನ್ನು ಖರೀದಿಸುವ ಸಂಬಂಧ ಮೇಲೆ ಓದಲಾದ ಕ್ರಮಸಂಖ್ಯೆ (7) ರಲ್ಲಿನ ಪತ್ರದಲ್ಲಿ ಏಳು ಸಂಸ್ಥೆಗಳಿಂದ ದರ ಪಟ್ಟಿಯನ್ನು ಕರೆಯಲಾಗಿತ್ತು. ಈ ಸಂಬಂಧ ಐದು ಸಂಸ್ಥೆಗಳು ಮಾತ್ರ ದರಪಟ್ಟಿ ಸಲ್ಲಿಸಿದ್ದು, ಅವುಗಳಲ್ಲಿ ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ಬೆಂಗಳೂರು ಸಂಸ್ಥೆಯು ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಫ್ಯಾಕ್ಸ್ ಉಪಕರಣವೊಂದಕ್ಕೆ ಅತಿ ಕಡಿಮೆ ದರ ಅಂದರೆ ರೂ.9,360.00 (ತೆರಿಗೆ ಸೇರಿ) ಮೊತ್ತವನ್ನು ನಮೂದಿಸಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರಮಸಂಖ್ಯೆ (8) ರ ಪತ್ರದಲ್ಲಿ ಒಟ್ಟು 06 (ಆರು) ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಫ್ಯಾಕ್ಸ್ ಯಂತ್ರಗಳನ್ನು ಒಟ್ಟು ರೂ.56,160.00 (ತೆರಿಗೆ ಸೇರಿ) ವೆಚ್ಚದಲ್ಲಿ ಖರೀದಿಸಿ ಒದಗಿಸುವಂತೆ ಕೋರಲಾಗಿತ್ತು. ಅದರಂತೆ ಈ ಸಂಸ್ಥೆಯು ಒಟ್ಟು 06 ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸಿದ್ದು ಮೇಲೆ ಕ್ರಮ ಸಂಖ್ಯೆ (9) ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 467 ಡಿಟಿಎನ್ 2008, ಬೆಂಗಳೂರು ದಿನಾಂಕ:4ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಮುಖ್ಯ ಮಂತ್ರಿಯವರ ಸಚಿವಾಲಯದ ಕಛೇರಿಗಳಿಗೆ ಮತ್ತು ಸಚಿವರ ಕಛೇರಿಗಳಿಗೆ ಒಟ್ಟು 06 (ಆರು) ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸಿರುವ ವೆಚ್ಚ ಒಟ್ಟು ರೂ. ಒಟ್ಟು ರೂ.56,160.00 (ರೂ. ಐವತ್ತಾರು ಸಾವಿರದ ಒಂದು ನೂರ ಅರವತ್ತು ಮಾತ್ರ) (ತೆರಿಗೆ ಸೇರಿ) ಗಳನ್ನು ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ನಂ.31/1, 2ನೇ ಅಡ್ಡರಸ್ತೆ, ಸಿ.ಕೆ.ಸಿ. ಗಾರ್ಡನ್, ಲಾಲ್‌ಬಾಗ್ ರಸ್ತೆ, ಬೆಂಗಳೂರು ಸಂಸ್ಥೆಗೆ ಪಾವತಿ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2013-ಮಂತ್ರಿಮಂಡಲ-800-ಇತರೆ ವೆಚ್ಚಗಳು-051-ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ:10.07.1996 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮಂಜುನಾಥ್**

ಪಿ.ಆರ್.797

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರ ವಿರುದ್ಧ ಇಲಾಖಾ ವಿಚಾರಣೆ-ಮರು ವಿಚಾರಣೆಗೆ ಪ್ರಕರಣವನ್ನು ವಿಚಾರಣಾಧಿಕಾರಿಗಳಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಎಸ್‌ಇಎನ್ 2004, ದಿನಾಂಕ:25.11.2005.

2) ವಿಚಾರಣಾ ವರದಿ ಸಂಖ್ಯೆ: 7/2005, ದಿನಾಂಕ:02.05.2006.

**ಪ್ರಸ್ತಾವನೆ:**

ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು 1998-99ರ ಅವಧಿಯಲ್ಲಿ ಬೆಳಗಾವಿಯಲ್ಲಿ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 1998-99ನೇ ಸಾಲಿನ ವಿಶೇಷ ಶಿಕ್ಷಕರುಗಳ ನೇಮಕಾತಿಗಾಗಿ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆಯಾದ ನಂತರ ಪಟ್ಟಿಯಲ್ಲಿ ಆಯ್ಕೆಯಾಗದ 5 ಮಂದಿ ಅಭ್ಯರ್ಥಿಗಳಿಂದ ಮೂಲ ಅರ್ಜಿಯೊಡನೆ ಸಲ್ಲಿಸದಿದ್ದ ಅಂಕ ಪಟ್ಟಿ ಹಾಗೂ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದು ನಿಯಮಗಳಿಗೆ ವಿರುದ್ಧವಾಗಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ನೇಮಕ ಮಾಡಿದ; ನಿಗದಿ ಪಡಿಸಿದ ವಿಶ್ವವಿದ್ಯಾಲಯಗಳ ಪದವಿಯನ್ನು ಹೊಂದದಿರುವ ಇಬ್ಬರು ಅಭ್ಯರ್ಥಿಗಳನ್ನು ಮೀಸಲಾತಿ ಗುಂಪಿನಲ್ಲಿ ಸಂಗೀತ ಶಿಕ್ಷಕರನ್ನಾಗಿ ನೇಮಕ ಮಾಡಿದ; ವಿಶೇಷ ಶಿಕ್ಷಕರುಗಳಾಗಿ ನೇಮಕಾತಿ ಆಗದ 6 ಮಂದಿ ಅಭ್ಯರ್ಥಿಗಳಿಗೆ ಕೌನ್ಸಿಲಿಂಗ್ ಮೂಲಕ ಈಗಾಗಲೇ ನೀಡಲಾಗಿದ್ದ ಸ್ಥಳ ನಿಯುಕ್ತಿ ಆದೇಶವನ್ನು ಬೇಕಾಬಿಟ್ಟಿ ಮಾರ್ಪಾಡು ಮಾಡಿದ 3 ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:25.11.2005ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಂ.ವಿ. ಶೀಲವಂತ್, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:02.05.2006ರ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯಲ್ಲಿ 3 ಆರೋಪಗಳು ಸಾಬೀತಾಗಿರುವುದಿಲ್ಲ, ಸದರಿ ವರದಿಯನ್ನು ಪರಿಶೀಲಿಸಲಾಗಿದೆ.

ವಿಚಾರಣಾಧಿಕಾರಿಗಳು 1ನೇ ಆರೋಪದ ಬಗ್ಗೆ ವಿಶ್ಲೇಷಿಸುತ್ತಾ ನೇಮಕಾತಿ ವಿಭಾಗದ ಆಕ್ಷೇಪಣಾ ರಿಜಿಸ್ಟರ್‌ನ ನಿಶಾನೆ ಡಿ-4 ರಿಂದ 7ರವರೆಗಿನವುಗಳನ್ನು ಗುರುತಿಸಿರುವುದಾಗಿಯೂ, ಇವುಗಳು ಸದರಿ ಅಭ್ಯರ್ಥಿಗಳು ಯಾವ ಯಾವ ಕಾಗದ ಪತ್ರಗಳನ್ನು ಹಾಜರು ಮಾಡಿರುತ್ತಾರೆ ಎಂಬುದನ್ನು ತೋರಿಸುತ್ತವೆ. ಇವುಗಳನ್ನು ನೋಡಲಾಗಿ ಸದರಿ ಅಭ್ಯರ್ಥಿಗಳು ಅಂಕಪಟ್ಟಿಯನ್ನಾಗಲೀ ಅಥವಾ ಪ್ರಮಾಣ ಪತ್ರವನ್ನಾಗಲೀ ಅನಂತರ ಹಾಜರ್ ಮಾಡಿರುವುದಾಗಿ ಕಂಡು ಬಂದಿರುವುದಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ, ನೇರ ನೇಮಕಾತಿಗೆ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಜನ್ಮ ದಿನಾಂಕ, ವಿದ್ಯಾರ್ಹತೆ, ಮೀಸಲಾತಿ ಮತ್ತು ಇತರೆ ಅರ್ಹತೆಗಳನ್ನು ಸಮರ್ಥಿಸುವ ದಾಖಲೆಗಳ ಪ್ರತಿಗಳನ್ನು ಲಗತ್ತಿಸುವುದು ನಿಯಮವಾಗಿರುತ್ತದೆ. ಅಗತ್ಯ ದಾಖಲೆಗಳಿಲ್ಲದೇ ಸಲ್ಲಿಸಲಾಗುವ ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಬೇಕೆಂಬುದು ನಿಯಮವೇ ವಿಧಿಸಿದ ನಿಬಂಧನೆಯಾಗಿದೆ. ತಾತ್ಕಾಲಿಕ ಪಟ್ಟಿಗೆ ಆಕ್ಷೇಪಣೆ ಸಲ್ಲಿಸುವ ಸಂದರ್ಭದಲ್ಲಿ ಮೂಲ ಅರ್ಜಿಯೊಂದಿಗೆ ಸಲ್ಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಲು ಅವಕಾಶವಿರುತ್ತದೆಯೇ ಹೊರತು ಮೂಲ ಅರ್ಜಿಯೊಂದಿಗೆ ಸಲ್ಲಿಸದೇ ಇರುವ ದಾಖಲೆಗಳನ್ನು ಹೊಸದಾಗಿ ಸೇರಿಸಲಾಗಲೀ, ಪರಿಗಣಿಸಲಾಗಲೀ ಅವಕಾಶವಿರುವುದಿಲ್ಲ. ಮೂಲ ಅರ್ಜಿಯೊಡನೆ ಸಲ್ಲಿಸದೇ ಇರುವ ಯಾವ ದಾಖಲೆಗಳನ್ನು ತಾತ್ಕಾಲಿಕ ಆಯ್ಕೆ ಪಟ್ಟಿಗೆ ಆಕ್ಷೇಪಣೆ ಸಲ್ಲಿಸುವ ಸಂದರ್ಭದಲ್ಲಿ ಪರಿಗಣಿಸಿ ಅಭ್ಯರ್ಥಿಗಳನ್ನು ಆರೋಪಿಯು ಆಯ್ಕೆ ಮಾಡಿರುತ್ತಾರೆ ಹಾಗೂ ಯಾವ ದಾಖಲೆಗಳನ್ನು ಪರಿಶೀಲಿಸಿಲ್ಲ ಎಂಬುದರ ಬಗ್ಗೆ ವಿಚಾರಣಾ ವರದಿಯಲ್ಲಿ ಪ್ರಸ್ತಾಪಿಸಿರುವುದಿಲ್ಲ ಹಾಗೆಯೇ ಅಪೂರ್ಣವಾಗಿ ಸಲ್ಲಿಸಿದ್ದ ಅರ್ಜಿಗಳನ್ನು ಯಾವ ಉದ್ದೇಶದಿಂದ ತಿರಸ್ಕರಿಸದೇ ನೇಮಕಾತಿಗೆ ಪರಿಗಣಿಸಿದ್ದಾರೆ ಎಂಬ ಬಗ್ಗೆ ವಿಶ್ಲೇಷಿಸಿಲ್ಲ.

ಎರಡನೇ ಆರೋಪದ ಬಗ್ಗೆ ವಿಶ್ಲೇಷಿಸುತ್ತಾ, ವಿಚಾರಣಾಧಿಕಾರಿಯವರು ದಿನಾಂಕ:30.10.1999ರ ಆದೇಶವನ್ನು ನಿರ್ದೇಶಕರು ನೀಡಿದ ಪ್ರಕಾರ ಮೈಸೂರು ಯೂನಿವರ್ಸಿಟಿಯ ಬಿ.ಎಫ್.ಎ. ಡಿಗ್ರಿಯನ್ನು ಮಾತ್ರ ಬಿ.ಮ್ಯೂಸಿಕ್ ಎಂದು ಹೆಸರು

ಬದಲಾಯಿಸಿದೆ. ದಿನಾಂಕ:22.08.1975ರ ಸರ್ಕಾರಿ ಆದೇಶ, ವೃಂದ ಮತ್ತು ನೇಮಕಾತಿ ನಿಯಮ 34(ಎ)ರ ಪ್ರಕಾರ ವಿದ್ವತ್ ಗ್ರೇಡ್ ಹಾಗೂ ಯಾವುದೇ ವಿಶ್ವವಿದ್ಯಾಲಯ ನೀಡಿದ ಬಿ.ಮ್ಯೂಸಿಕ್ ಡಿಗ್ರಿ ತತ್ಸಮವೆಂದು ತಿಳಿಯತಕ್ಕದ್ದೆಂದು ಸೂಚಿಸುತ್ತದೆ. ಇದರಂತೆ ಖಾನಡೆ ಹಾಗೂ ಮೆಹರವಾಡೆ ಇವರುಗಳು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸಂಗೀತ ಶಿಕ್ಷಕರುಗಳ ಹುದ್ದೆಗೆ ಅರ್ಹತೆ ಪಡೆದಿದ್ದರು. ಸದರಿ ನಿಯಮದ ಪ್ರಕಾರ ಬಿ.ಮ್ಯೂಸಿಕ್ ಹಾಗೂ ಬಿ.ಎಫ್.ಎ. ಎರಡೂ ತತ್ಸಮಾನ ಪದವಿ ಅರ್ಹತೆ ಇರುತ್ತದೆ. ಹೀಗಾಗಿ ಇವರುಗಳು ನಿಗದಿತ ವಿದ್ಯಾರ್ಹತೆಯನ್ನು ಹೊಂದಿರುವುದಿಲ್ಲವೆಂದು ಹೇಳಲು ಬರುವುದಿಲ್ಲ. ಹೀಗಾಗಿ ಅವರುಗಳನ್ನು ಆಯ್ಕೆ ಮಾಡಿದ ಕ್ರಮ ದುರ್ನಡತೆಯಲ್ಲವೆಂದು ನಿರ್ಣಯಿಸಿದ್ದಾರೆ. ವಿಚಾರಣಾಧಿಕಾರಿಗಳು ಕೇವಲ ವೃಂದ ಮತ್ತು ನೇಮಕಾತಿ ನಿಯಮಗಳ ಮೂಲ ನಿಯಮಗಳಲ್ಲಿನ ವಿದ್ಯಾರ್ಹತೆಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡಿದ್ದು ಕಾಲಕಾಲಕ್ಕೆ ಸದರಿ ನಿಯಮಗಳಿಗೆ ಸರ್ಕಾರದಿಂದ ಮಾಡಲಾದ ತಿದ್ದುಪಡಿಗಳನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಮೂಲ ನಿಯಮ 34(ಎ)ರ ಪ್ರಕಾರ ವಿದ್ವತ್ ಗ್ರೇಡ್ ಹಾಗೂ ಯಾವುದೇ ವಿಶ್ವವಿದ್ಯಾಲಯ ನೀಡಿದ ಬಿ.ಮ್ಯೂಸಿಕ್ ಡಿಗ್ರಿ ಎಂದು ಇರುವುದನ್ನು ಮಾತ್ರ ವಿಚಾರಣಾಧಿಕಾರಿಗಳು ಆಧಾರವಾಗಿಟ್ಟುಕೊಂಡಿದ್ದಾರೆ. ಆದರೆ ಪ್ರೌಢ ಶಿಕ್ಷಣ ನಿರ್ದೇಶಕರು ನೀಡಿರುವ ದಿನಾಂಕ:30.10.1999ರ ಸ್ಪಷ್ಟೀಕರಣದಂತೆ ಸಂಗೀತ ಶಿಕ್ಷಕರ ಹುದ್ದೆಗೆ ನೇಮಕಾತಿಗೆ ಕರ್ನಾಟಕ ವಿಶ್ವವಿದ್ಯಾಲಯದ ಬಿ.ಮ್ಯೂಸಿಕ್ ವಿದ್ಯಾರ್ಹತೆಯನ್ನು ಪರಿಗಣಿಸುವಂತಿಲ್ಲ.

ಮೂರನೇ ಆರೋಪ ಕುರಿತು ತಮ್ಮ ವಿಶ್ಲೇಷಣೆಯಲ್ಲಿ ವಿಚಾರಣಾಧಿಕಾರಿಗಳು ನೇಮಕಾತಿ ಆದೇಶ ಪಡೆದ 5 ಮಂದಿ ಹೊಲಿಗೆ ಶಿಕ್ಷಕರು ನೇಮಿಸಿದ ಸ್ಥಳಕ್ಕೆ ಹೋದಾಗ ಹುದ್ದೆ ಖಾಲಿ ಇಲ್ಲದ ಕಾರಣ ಸಂಬಂಧಪಟ್ಟ ಮುಖ್ಯೋಪಾಧ್ಯಾಯರಿಂದ ಹುದ್ದೆ ಖಾಲಿ ಇಲ್ಲದಿರುವ ಬಗ್ಗೆ ಲಿಖಿತ ಪತ್ರಗಳನ್ನು ತಂದು ಆರೋಪಿಯ ಮುಂದೆ ಹಾಜರುಪಡಿಸಿದ್ದಾರೆ. ನಂತರ ಆರೋಪಿಯು ನೋಟ್ ಮಾಡಿಕೊಂಡು ಸದರಿ ಹುದ್ದೆಗಳು ಖಾಲಿ ಇಲ್ಲದಿರುವುದನ್ನು ನೋಡಿಕೊಂಡು ಮರು ಸ್ಥಳನಿಯುಕ್ತಿಗೊಳಿಸಿದ್ದಾರೆಂದು ತಿಳಿಸಿ ಆರೋಪ ಸಾಬೀತಾಗಿಲ್ಲವೆಂದು ನಿರ್ಣಯಿಸಿದ್ದಾರೆ. ಆದರೆ ನೇರ ನೇಮಕಾತಿ ಪ್ರಕಟಣೆ ನೀಡುವಾಗ ಅಗತ್ಯಕ್ಕನುಗುಣವಾಗಿ ಹುದ್ದೆಗಳನ್ನು ಗುರುತಿಸಿ ಕಾಯ್ದಿರಿಸುವುದು ಕಡ್ಡಾಯವಾಗಿದೆ. ವಿಚಾರಣಾ ವರದಿಯಲ್ಲಿಯೇ ಮೂಡಿ ಬಂದಿರುವಂತೆ ನೇರ ನೇಮಕಾತಿಗಾಗಿ ಕಾಯ್ದಿರಿಸಿದ ಹುದ್ದೆಗಳಲ್ಲಿ ಬೇರೆ ಶಿಕ್ಷಕರುಗಳನ್ನು ವರ್ಗಾವಣೆ ಮೂಲಕ ತುಂಬಿರುವುದು ಕಂಡುಬರುತ್ತದೆ. ಇದನ್ನು ಆಯ್ಕೆ ಪ್ರಾಧಿಕಾರಿಗಳೇ ಅಲ್ಲದೆ ಇತರೆ ಪ್ರಾಧಿಕಾರಿಗಳೂ ಮಾಡಿದ್ದಾರೆ.

ಹೀಗಾಗಿ ನೇರ ನೇಮಕಾತಿ ಅಭ್ಯರ್ಥಿಗಳಿಗೆಂದೇ ಕಾಯ್ದಿರಿಸಲಾಗಿದ್ದ ಹುದ್ದೆಗಳು ಅವರಿಗೆ ಸ್ಥಳ ನಿಯುಕ್ತಿಗೊಳಿಸಿದಾಗ ಅವರಿಗೆ ಖಾಲಿ ಇಲ್ಲದಂತಹ ಪರಿಸ್ಥಿತಿಯನ್ನು ನಿರ್ಮಾಣ ಮಾಡಲಾಗಿದೆ. ಇಂತಹ ಸಂದರ್ಭಗಳಲ್ಲಿ ಸಂಬಂಧಪಟ್ಟ ಉಪನಿರ್ದೇಶಕರಿಂದ ವಿವರವಾದ ವರದಿಯನ್ನು ಪಡೆಯದೇ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರು ಹುದ್ದೆ ಖಾಲಿ ಇಲ್ಲದಿರುವ ಬಗ್ಗೆ ನೀಡಿದ ಲಿಖಿತ ಪತ್ರಗಳನ್ನು ಆಧಾರವಾಗಿಟ್ಟುಕೊಂಡು ಮರುಸ್ಥಳ ನಿಯುಕ್ತಿಗೊಳಿಸಿರುವುದು ತೀವ್ರವಾದ ಕರ್ತವ್ಯಲೋಪವಾಗಿದೆ. ಅದೇ ವಿಚಾರಣೆಯನ್ನು ಹೂಡಲು ಮುಖ್ಯ ಆಧಾರವಾಗಿದೆ. ಈ ಅಂಶವನ್ನು ವಿಚಾರಣೆಯಲ್ಲಿ ಪ್ರಸ್ತಾಪಿಸಿಲ್ಲ ಹಾಗೂ ಪರಿಗಣಿಸಿಲ್ಲ.

ಮೇಲಿನ ಎಲ್ಲಾ ಕಾರಣಗಳಿಂದಾಗಿ ವಿಚಾರಣೆಯಲ್ಲಿ ನಿಯಮಾನುಸಾರ ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂದು ಸರ್ಕಾರವು ನಿರ್ಣಯಿಸಿ ಮರುವಿಚಾರಣೆಗೆ ವಹಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಎಸ್‌ಇಎನ್ 2004, ಬೆಂಗಳೂರು, ದಿನಾಂಕ:3ನೇ ಮಾರ್ಚ್, 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಪ್ರಕರಣವನ್ನು ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮರು ವಿಚಾರಣೆ ನಡೆಸಿ ವರದಿ ಸಲ್ಲಿಸುವ ಸಲುವಾಗಿ ವಿಚಾರಣಾಧಿಕಾರಿಗಳಿಗೆ ಹಿಂತಿರುಗಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್.800

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕಾರ್ಮಿಕ ಸಚಿವಾಲಯ

**ವಿಷಯ:** ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್ ಸ್ಥಾಪಿಸಲು ಆಯವ್ಯಯ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**1) ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಎಲ್‌ಇಟಿ 2008, ದಿನಾಂಕ:12.09.2008.

2) ಸರ್ಕಾರದ ಸಮಸಂಖ್ಯೆಯ ಪತ್ರ ದಿನಾಂಕ:20.01.2009.

3) ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಎಸಿಟಿ–1/ಸಿಆರ್–57/2008–09, ದಿನಾಂಕ:23.01.2009 ಮತ್ತು 09.02.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:12.09.2008ರಲ್ಲಿ ರಾಷ್ಟ್ರೀಯ ಕಾನೂನು ಶಾಲೆ (National Law School of India University) ಇವರ ಸಹಯೋಗದೊಂದಿಗೆ ಕಾರ್ಮಿಕ ಅಧ್ಯಯನ ವಿಷಯಗಳಿಗಾಗಿ ರಾಜ್ಯ ಸಂಸ್ಥೆಯನ್ನು ಅಂದರೆ ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್‌ನ್ನು ಸ್ಥಾಪಿಸಲು ಕೆಲವೊಂದು ಷರತ್ತುಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ದಿನಾಂಕ:20.01.2009ರ ಪತ್ರದಲ್ಲಿ Memorandum of Association and Bye-Law's ನ್ನು ಸರ್ಕಾರವು ಪರಿಶೀಲಿಸಿ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ ಮತ್ತು ರಿಜಿಸ್ಟ್ರೇಷನ್ ಆಕ್ಟ್ ಪ್ರಕಾರ ಈ ಸಂಸ್ಥೆಯನ್ನು ನೋಂದಾಯಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಕಾರ್ಮಿಕ ಆಯುಕ್ತರಿಗೆ ತಿಳಿಸಲಾಗಿದೆ.

ಕಾರ್ಮಿಕ ಆಯುಕ್ತರು ಮೇಲೆ (3) ರಲ್ಲಿ ಓದಲಾದ ದಿನಾಂಕ:23.01.2009ರ ಪತ್ರದಲ್ಲಿ ಸೊಸೈಟಿಯು ನೋಂದಾಯಿಸಲಾಗುತ್ತಿದೆ ಎಂದು ಕಾರ್ಪೋರೇಷನ್ ಬ್ಯಾಂಕ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು ಈ ಶಾಖೆಯಲ್ಲಿ ಉಳಿತಾಯ ಖಾತೆ 01-003399 ತೆರೆಯಲಾಗಿದೆಯೆಂದೂ, 2008-09ನೇ ಸಾಲಿನಲ್ಲಿ 2230-01-277-0-01-ಯೋಜನೆ-ಲೆಕ್ಕಶೀರ್ಷಿಕೆ ಅಡಿಯಲ್ಲಿ ಹಂಚಿಕೆ ಮಾಡಿರುವ 65.68 ಲಕ್ಷ ರೂ.ಗಳ ಆಯವ್ಯಯವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 363 ಎಲ್‌ಇಟಿ 2008, ಬೆಂಗಳೂರು, ದಿನಾಂಕ:13ನೇ ಫೆಬ್ರವರಿ, 2009**

2008-09ನೇ ಸಾಲಿನಲ್ಲಿ ನೀಡಲಾದ ಲೆಕ್ಕಶೀರ್ಷಿಕೆ 2230-01-277-0-01-ಯೋಜನೆ ಅಡಿಯಲ್ಲಿ ಒದಗಿಸಿರುವ 65.68 ಲಕ್ಷ ರೂ.ಗಳ (ಅರವತ್ತೈದು ಲಕ್ಷದ ಅರವತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ವೆಚ್ಚವನ್ನು ಭರಿಸುವ ಸಲುವಾಗಿ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ಅನುದಾನದ ಬಿಲ್ಲಿಗೆ ಮೇಲು ರುಜು ಮಾಡುವ ಅಧಿಕಾರವನ್ನು ಕಾರ್ಮಿಕ ಆಯುಕ್ತರು ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಕಕಾ 15 ಆಂಆಸ 2009, ದಿನಾಂಕ:04.02.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**

ಪಿ.ಆರ್.807

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ-ಕರ್ನಾಟಕ ಇದರಡಿ, 2008-09ನೇ ಸಾಲಿನಲ್ಲಿ ಗುಲ್ಬರ್ಗಾ ಜಿಲ್ಲೆಗೆ ಮೂರನೇ ಕಂತಿನ ರಾಜ್ಯದ ಅನುದಾನ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ-12022/4/2008-ಎನ್.ಆರ್.ಇ.ಜಿ.ಎ-ಎಸ್.ಎಲ್. ನಂ.762 ದಿನಾಂಕ:20.02.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ ಕೇಂದ್ರ ಸರ್ಕಾರವು ಗುಲ್ಬರ್ಗಾ ಜಿಲ್ಲೆಗೆ ರು.3621.00 ಲಕ್ಷಗಳನ್ನು ಮೂರನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008-09ನೇ ಸಾಲಿನಲ್ಲಿ ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡಾ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಗುಲ್ಬರ್ಗಾ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ.362.10 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ.02.ಉಖಾಯೋ.08, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ- ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2008-09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಮೂರನೇ ಕಂತಿನ ಅನುದಾನವಾದ ರೂ.362.10 ಲಕ್ಷಗಳನ್ನು (ರೂ. ಮೂರು ಕೋಟಿ

ಅರವತ್ತೆರಡು ಲಕ್ಷದ ಹತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಗುಲ್ಬರ್ಗಾ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ: ಎಫ್‌ಡಿ, 7 ಜೆಡ್‌ಪಿಎ 2003 ದಿನಾಂಕ:14.07.2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಆ 07 ದಿನಾಂಕ:19.01.2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶಿರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101– ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:01.02.2007 ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ:79:ಪಿಬಿಎಸ್:2009 ದಿನಾಂಕ:27.02.2009ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ. ಜಾಫರ್**

ನಿರ್ದೇಶಕರು,

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE TO G.O.NO.RDP:02:NRE:2008, BANGALORE, DATED:28.02.2009**

Statement showing the releases of IIIrd installment of state share of funds under NREGA during 2008-09.

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1. | Gulbarga | 20-02-2009 | 3621.00 | 362.10 | 362.10 |

**Dr. P.C. JAFFER**

Director,

PR-809

National Rural Employment Guarantee Scheme

& E/o. Dy. Secretary to Government,

Rural Development & Panchayat Raj Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ:** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ 8 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2008 ಎಸ್‌ಜಿಎಸ್‌ವೈ–I(12) ದಿನಾಂಕ:02.04.2008, (39) ದಿನಾಂಕ:22.05.2008 ಮತ್ತು (63) ದಿನಾಂಕ:26.06.2008.

2) ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ:12.05.2008 ಮತ್ತು 29.07.2008.

3) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2008 ಎಸ್‌ಜಿಎಸ್‌ವೈ–I(126) ದಿನಾಂಕ:18.12.2008, (146) ದಿನಾಂಕ:14.01.2009 ಮತ್ತು (171) ದಿನಾಂಕ:28.01.2009.

4) ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ:30.01.2009 ಮತ್ತು 16.02.2009.

5) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2008 ಎಸ್‌ಜಿಎಸ್‌ವೈ–I(183) ದಿನಾಂಕ:09.02.2009 ಮತ್ತು (198) ದಿನಾಂಕ:18.02.2009.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಕೇಂದ್ರ ಸರ್ಕಾರವು ಓದಲಾಗಿದೆ (1)ರಲ್ಲಿ ಒಂದನೇ ಕಂತಿನ ಅನುದಾನವಾಗಿ ಒಟ್ಟು ರೂ.40,08,44,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ಓದಲಾಗಿದೆ (2)ರನ್ವಯ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದಂತೆ ತನ್ನ ಪಾಲಿನ ಮೊದಲನೇ ಕಂತಿನ ಅನುದಾನ ರೂ.13,21,59,000 ಬಿಡುಗಡೆ ಮಾಡಲಾಗಿದೆ. ಓದಲಾಗಿದೆ (3) ರಲ್ಲಿನ ದಿನಾಂಕಗಳಲ್ಲಿ ಕೇಂದ್ರ ಸರ್ಕಾರ ಈ ಯೋಜನೆಗೆ ರಾಜ್ಯದ 18 ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ.19,51,85,000ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಓದಲಾಗಿದೆ (4)ರ ಆದೇಶದಲ್ಲಿ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.6,44,80,000 ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5)ರ ಪತ್ರದಲ್ಲಿ ಕೇಂದ್ರ ಸರ್ಕಾರ ಎಸ್‌ಜಿಎಸ್‌ವೈ ಯಡಿ ರಾಜ್ಯದ ಬೆಳಗಾಂ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಹಾವೇರಿ, ಮಂಡ್ಯ, ರಾಯಚೂರು ಮತ್ತು ಉಡುಪಿ ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ.8,44,59,000ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ರೂ.2,81,53,000ನ್ನು ನೀಡಬೇಕಾಗಿದೆ. ಚಾಮರಾಜನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ರಾಜ್ಯದ ಆಯವ್ಯಯದಲ್ಲಿ ಅನುದಾನದ ಕೊರತೆಯಿರುವುದರಿಂದ ಈ ಜಿಲ್ಲೆಗಳಿಗೆ ಲಭ್ಯತೆ ಆಧಾರದ ಮೇಲೆ ಹಾಗೂ ಉಳಿದ ಜಿಲ್ಲೆಗಳಿಗೆ ಎರಡನೇ ಕಂತಿನ ಪೂರ್ಣ ಅನುದಾನವಾಗಿ ಒಟ್ಟು ರೂ.2,41,59,000 ನ್ನು ಬಿಡುಗಡೆ ಮಾಡಲು ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 32ಎಸ್‌ಜೆವೈ 2008, ಬೆಂಗಳೂರು, ದಿನಾಂಕ:2ನೇ ಮಾರ್ಚ್, 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಬೆಳಗಾಂ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಹಾವೇರಿ, ಮಂಡ್ಯ, ರಾಯಚೂರು ಮತ್ತು ಉಡುಪಿ ಜಿಲ್ಲೆಗಳಿಗೆ ಒಟ್ಟು ರೂ.2,41,59,000ಗಳನ್ನು (ರೂ.ಎರಡು ಕೋಟಿ ನಲವತ್ತೊಂದು ಲಕ್ಷದ ಐವತ್ತೊಂಬತ್ತು ಸಾವಿರ ಮಾತ್ರ) ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501– ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14.07.2005ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007 ದಿನಾಂಕ:18.04.2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 78 ಪಿಬಿಎಸ್ 2009 ದಿನಾಂಕ:27.02.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 32 ಎಸ್‌ಜಿವೈ 2008, ಬೆಂಗಳೂರು, ದಿನಾಂಕ:02.03.2009ಕ್ಕೆ ಅನುಬಂಧ**

**(ರೂ.ಗಳಲ್ಲಿ)**

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾಗಿರುವ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದಂತೆ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|
| 1. | ಬೆಳಗಾವಿ | 413 | 2200ZZ0002 | 2,51,88,000 | 83,96,000 | 83,96,000 |
| 2. | ಚಾಮರಾಜನಗರ | 456 | 1000ZZ0001 | 1,55,77,000 | 51,92,000 | 31,47,000 |
| 3. | ಚಿಕ್ಕಮಗಳೂರು | 408 | 1800ZZ0017 | 39,05,000 | 13,02,000 | 13,02,000 |
| 4. | ಚಿಕ್ಕಬಳ್ಳಾಪುರ | 453 | 0600ZZ0001 | 61,84,000 | 20,61,000 | 1,12,000 |
| 5. | ಹಾವೇರಿ | 463 | 2700ZZ0001 | 1,25,72,000 | 41,91,000 | 41,91,000 |
| 6. | ಮಂಡ್ಯ | 412 | 1100ZZ0001 | 58,05,000 | 19,35,000 | 19,35,000 |
| 7. | ರಾಯಚೂರು | 420 | 3600ZZ0001 | 1,16,20,000 | 38,73,000 | 38,73,000 |
| 8. | ಉಡುಪಿ | 457 | 2000ZZ0001 | 36,08,000 | 12,03,000 | 12,03,000 |
| | **ಒಟ್ಟು** | | | **8,44,59,000** | **2,81,53,000** | **2,41,59,000** |

* ಚಾಮರಾಜನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ರಾಜ್ಯದ ಆಯವ್ಯಯದಲ್ಲಿ ಸಾಕಷ್ಟು ಅನುದಾನ ಲಭ್ಯವಿಲ್ಲದ ಕಾರಣ ಲಭ್ಯವಿದ್ದ ಅನುದಾನ ಮಾತ್ರ ಬಿಡುಗಡೆಗೊಳಿಸಿದೆ.

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪಿ.ಆರ್.810

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಶಿಕ್ಷಣ ಇಲಾಖೆ

**ವಿಷಯ:** ಅನುದಾನರಹಿತ ಖಾಸಗಿ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನ ಅನುದಾನಕ್ಕೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಅಧಿಸೂಚನೆ ಸಂ. ಇಡಿ 6 ವಿವಿಧ 2001, ದಿನಾಂಕ:12–10–2001

(2) ಸರ್ಕಾರದ ಪತ್ರ ಸಂ. ಇಡಿ 176 ಯುಜಿವಿ 2004(ಭಾಗ), ದಿನಾಂಕ:27–02–2008

(3) ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆ ಸಂ. ಶಿತ3–ಇತರೆ–ಅನುದಾನ/02/08–09, ದಿನಾಂಕ:06–11–2008

**ಪ್ರಸ್ತಾವನೆ:**

ರಾಜ್ಯದಲ್ಲಿ ದಿನಾಂಕ:01–06–1987ರ ಪೂರ್ವದಲ್ಲಿ ಪ್ರಾರಂಭಿಸಲಾದ ಅನುದಾನರಹಿತ ಶಿಕ್ಷಣ ಮಹಾ ವಿದ್ಯಾಲಯಗಳನ್ನು (ಬಿ.ಇಡಿ ಕಾಲೇಜುಗಳನ್ನು) ವೇತನ ಅನುದಾನಕ್ಕೆ ಒಳಪಡಿಸಲು ಈ ಮಹಾವಿದ್ಯಾಲಯದಲ್ಲಿ ನೇಮಕಗೊಂಡು ಸೇವೆ ಸಲ್ಲಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ವೇತನ ಅನುದಾನ ನೀಡುವಂತೆ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಪ್ರಸ್ತಾಪಿಸಿರುವುದರಿಂದ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನ ಅನುದಾನಕ್ಕೆ ಒಳಪಡಿಸಲು ಪರಿಶೀಲಿಸಿ, ಸರ್ಕಾರವು ವೇತನ ಅನುದಾನ ಸಂಹಿತೆಯನ್ವಯ ಅರ್ಹ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನ ಅನುದಾನಕ್ಕೆ ಒಳಪಡಿಸಬೇಕೆಂದು ತೀರ್ಮಾನಿಸಲಾಗಿದೆ. ಅದರಂತೆ ಅನುದಾನ ಸಂಹಿತೆಯ ಅರ್ಹ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನ ಅನುದಾನಕ್ಕೆ ಒಳಪಡಿಸಲು ನಿರ್ಧರಿಸಿರುವುದರಿಂದ, ಪ್ರಸ್ತಾಪಿಸಿರುವ ಶಿಕ್ಷಣ ಮಹಾವಿದ್ಯಾಲಯಗಳಿಗೆ ಮೇಲೆ ಓದಲಾದ (1)ರ ದಿನಾಂಕ:12–10–2001ರ ಅಧಿಸೂಚನೆಯಲ್ಲಿ ಈ ಕೆಳಕಂಡಂತೆ ಬೋಧಕ/ಬೋದಕೇತರ ಹುದ್ದೆಗಳನ್ನು ನಿಗದಿಪಡಿಸಲಾಗಿದೆ.

**STANDARD STAFFING PATTERN FOR COLLEGES OF EDUCATION IMPARTING B.Ed COURSE**

In Colleges of Teachers Education imparting B.Ed Course, with an intake capacity of **100** students, the following teaching and non-teaching posts may be sanctioned.

| Sl.No. | Designation | | No. of Posts |
|---|---|---|---|
| 1 | Principal/Head | - | 1 (one) |
| 2 | Readers/Lecturers | - | 9(nine) |
| 3 | Librarian | - | 1 (one) |
| 4 | Library Clerk/Library Assistant | - | 1 (one) |
| 5 | First Division Clerk/Assistant/Accountant/ Head Clerk | - | 2 (Two) |
| 6 | Attenders for Library and Office | - | 3 (three) |
| 7 | Watchman | - | 1(one) |
| 8 | Scavenger | - | 1(one) |
| 9 | Peons/Class IV | - | 4 (four) |
| 10 | Technician (Film Operator or Mechanic) | - | 1 (one) |
| 11 | Clerk-cum-Typists | - | 2(two) |
| 12 | Physical Education Instructor | - | 1(one) |

ಅದರನ್ವಯ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2) ಸರ್ಕಾರವು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 21 ಅನುದಾನ ರಹಿತ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನ ಅನುದಾನಕ್ಕೆ ಒಳಪಡಿಸಲು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ, ಈ ಕೆಳಕಂಡಂತೆ ಆದೇಶ ಭಾಗದಲ್ಲಿ ತಿಳಿಸಿರುವ ಅನುದಾನರಹಿತ ಶಿಕ್ಷಣ ಮಹಾವಿದ್ಯಾಲಯಗಳಿಗೆ ವೇತನ ಅನುದಾನ ಹಾಗೂ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು ಪ್ರಸ್ತಾಪಿಸಿರುವ ಬೋಧಕ/ಬೋಧಕೇತರ ಹುದ್ದೆಗಳಿಗೆ ಮಂಜೂರಾತಿ ನೀಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು ಮತ್ತು ವಿಳಾಸ | ಹುದ್ದೆಗಳು | |
|---|---|---|---|
| | | ಬೋಧಕ | ಬೋಧಕೇತರ |
| 1 | ಕೆ.ಎಲ್.ಇ. ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯ, ಹುಬ್ಬಳ್ಳಿ, ಧಾರವಾಡ ಜಿಲ್ಲೆ. | 1+8 | 09 |
| 2 | ಶ್ರೀ ಕುಮಾರೇಶ್ವರ ಶಿಕ್ಷಣ ಮಹಾವಿದ್ಯಾಲಯ, ಹಾನಗಲ್, ಹಾವೇರಿ ಜಿಲ್ಲೆ | 1+9 | 13 |
| 3 | ಶ್ರೀ ಶಿವಾಜಿ ಶಿಕ್ಷಣ ಮಹಾವಿದ್ಯಾಲಯ, ಬಾಡ, ಕಾರವಾರ ಜಿಲ್ಲೆ. | 1+8 | 17 |
| 4 | ಶ್ರೀ ಕೆ. ವೆಂಕಟಪತೆಪ್ಪ ಶಿಕ್ಷಣ ಮಹಾವಿದ್ಯಾಲಯ, ಚಿಕ್ಕಬಳ್ಳಾಪುರ | 1+9 | 16 |
| 5 | ಶ್ರೀ ಸರ್ವಜ್ಞ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು. | 1+7 | 15 |
| 6 | ಸಂಜಯಗಾಂಧಿ ಶಿಕ್ಷಣ ಮಹಾವಿದ್ಯಾಲಯ, ಹೆಬ್ಬಾಳ, ಬೆಂಗಳೂರು | 1+7 | 10 |
| 7 | ನ್ಯೂ ಹಾರಿಜನ್ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು | 1+7 | 09 |
| 8 | ಕೆ.ಎಸ್.ಇ.ಎಫ್ ಶಿಕ್ಷಣ ಮಹಾವಿದ್ಯಾಲಯ, ತುಮಕೂರು | 1+4 | 05 |
| 9 | ಟಿ.ವಿ. ವೆಂಕಟಸ್ವಾಮಿ ಶಿಕ್ಷಣ ಮಹಾವಿದ್ಯಾಲಯ, ಮಧುಗಿರಿ. ಮಧುಗಿರಿ ಶೈಕ್ಷಣಿಕ ಜಿಲ್ಲೆ | 7 | 8 |
| 10 | ಸರ್ವೋದಯ ಶಿಕ್ಷಣ ಮಹಾವಿದ್ಯಾಲಯ, ವೀರಾಜ ಪೇಟೆ, ಕೊಡಗು ಜಿಲ್ಲೆ | 1+8 | 10 |
| 11 | ಎಸ್.ಆರ್.ಕೆ. ಶಿಕ್ಷಣ ಮಹಾವಿದ್ಯಾಲಯ, ರಾಯಚೂರು. | 1+6 | 8 |
| 12 | ಶ್ರೀ ಬಸವೇಶ್ವರ ಶಿಕ್ಷಣ ಮಹಾವಿದ್ಯಾಲಯ, ಬೀದರ್ | 1+8 | 14 |
| 13 | ಬಿ.ಎಲ್.ಡಿ.ಇ.ಎ. ಸಂಸ್ಥೆಯ ಜೆ.ಎಸ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಬಿಜಾಪುರ. | 1+9 | 14 |
| 14 | ಶ್ರೀ ಜಗದ್ಗುರು ಪಂಚಚಾರ್ಯ ಶಿಕ್ಷಣ ಮಹಾವಿದ್ಯಾಲಯ, ಗದಗ. | 1+8 | 12 |
| 15 | ಗೋಲ್ಡ್ ಫೀಲ್ಡ್ ಮಹಾವಿದ್ಯಾಲಯ, ಬಂಗಾರಪೇಟೆ, ಕೋಲಾರ ಜಿಲ್ಲೆ. | 1+9 | 13 |
| 16 | ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು. | 8 | 11 |
| 17 | ಕಿತ್ತೂರುರಾಣಿ ಚನ್ನಮ್ಮ ಶಿಕ್ಷಣ ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯ, ಬೈಲಹೊಂಗಲ, ಬೆಳಗಾಂ ಜಿಲ್ಲೆ. | 1+7 | 09 |
| 18 | ಟಿ.ಎಂ.ಎ.ಇ. ಶಿಕ್ಷಣ ಮಹಾವಿದ್ಯಾಲಯ, ಗಂಗಾವತಿ | 1+6 | 16 |
| 19 | ಎಸ್.ಆರ್.ಕಂಠಿ ಶಿಕ್ಷಣ ಮಹಾವಿದ್ಯಾಲಯ, ಇಳಕಲ್, ಹುನಗುಂದ ತಾಲ್ಲೂಕು, ಬಾಗಲಕೋಟೆ | 1+9 | 09 |
| 20 | ಶ್ರೀ ಕ್ರಾಂತಿವೀರಸಂಗೊಳ್ಳಿ ರಾಯಣ್ಣ ಶಿಕ್ಷಣ ಮಹಾವಿದ್ಯಾಲಯ, ಬೆಳಗಾಂ | 1+9 | 14 |
| 21 | ಹಾಸನಾಂಬ ಶಿಕ್ಷಣ ಮಹಾವಿದ್ಯಾಲಯ, ಹಾಸನ. | 1+7 | 10 |

**ಸರ್ಕಾರಿ ಆದೇಶ ಸಂಖ್ಯೆ:ಇಡಿ 176 ಯುಜಿವಿ 2004 (ಭಾಗ), ಬೆಂಗಳೂರು, ದಿನಾಂಕ:19ನೇ ಮೇ, 2009**

3) ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಈ ಕೆಳಕಂಡ 21 ಶಿಕ್ಷಣ ಮಹಾವಿದ್ಯಾಲಯಗಳನ್ನು ಅವುಗಳ ಮುಂದೆ ತೋರಿಸಿರುವ ಸೂಚಿಸಿರುವ ಬೋಧಕ/ಬೋಧಕೇತರ ಹುದ್ದೆಗಳನ್ನೊಳಗೊಂಡಂತೆ ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಅಧಿಸೂಚನೆಯನ್ವಯ ಮತ್ತು ಈ ಕೆಳಕಾಣಿಸಿದ ಷರತ್ತುಗಳಿಗೊಳಪಡಿಸಿ, ವೇತನ ಅನುದಾನಕ್ಕೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು ಮತ್ತು ವಿಳಾಸ | ಹುದ್ದೆಗಳು | |
|---|---|---|---|
| | | ಬೋಧಕ | ಬೋಧಕೇತರ |
| 1 | ಕೆ.ಎಲ್.ಇ. ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯ, ಹುಬ್ಬಳ್ಳಿ, ಧಾರವಾಡ ಜಿಲ್ಲೆ. | 1+8 | 09 |

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು ಮತ್ತು ವಿಳಾಸ | ಹುದ್ದೆಗಳು | |
|---|---|---|---|
| | | ಬೋಧಕ | ಬೋಧಕೇತರ |
| 2 | ಶ್ರೀ ಕುಮಾರೇಶ್ವರ ಶಿಕ್ಷಣ ಮಹಾವಿದ್ಯಾಲಯ, ಹಾನಗಲ್, ಹಾವೇರಿ ಜಿಲ್ಲೆ | 1+9 | 13 |
| 3 | ಶ್ರೀ ಶಿವಾಜಿ ಶಿಕ್ಷಣ ಮಹಾವಿದ್ಯಾಲಯ, ಬಾಡ, ಕಾರವಾರ ಜಿಲ್ಲೆ. | 1+8 | 17 |
| 4 | ಶ್ರೀ ಕೆ. ವೆಂಕಟಪತೆಪ್ಪ ಶಿಕ್ಷಣ ಮಹಾವಿದ್ಯಾಲಯ, ಚಿಕ್ಕಬಳ್ಳಾಪುರ | 1+9 | 16 |
| 5 | ಶ್ರೀ ಸರ್ವಜ್ಞ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು. | 1+7 | 15 |
| 6 | ಸಂಜಯಗಾಂಧಿ ಶಿಕ್ಷಣ ಮಹಾವಿದ್ಯಾಲಯ, ಹೆಬ್ಬಾಳ, ಬೆಂಗಳೂರು | 1+7 | 10 |
| 7 | ನ್ಯೂ ಹಾರಿಜನ್ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು | 1+7 | 09 |
| 8 | ಕೆ.ಎಸ್.ಇ.ಎಫ್ ಶಿಕ್ಷಣ ಮಹಾವಿದ್ಯಾಲಯ, ತುಮಕೂರು | 1+4 | 05 |
| 9 | ಟಿ.ವಿ. ವೆಂಕಟಸ್ವಾಮಿ ಶಿಕ್ಷಣ ಮಹಾವಿದ್ಯಾಲಯ, ಮಧುಗಿರಿ. ಮಧುಗಿರಿ ಶೈಕ್ಷಣಿಕ ಜಿಲ್ಲೆ | 7 | 8 |
| 10 | ಸರ್ವೋದಯ ಶಿಕ್ಷಣ ಮಹಾವಿದ್ಯಾಲಯ, ವೀರಾಜ ಪೇಟೆ, ಕೊಡಗು ಜಿಲ್ಲೆ | 1+8 | 10 |
| 11 | ಎಸ್.ಆರ್.ಕೆ. ಶಿಕ್ಷಣ ಮಹಾವಿದ್ಯಾಲಯ, ರಾಯಚೂರು. | 1+6 | 8 |
| 12 | ಶ್ರೀ ಬಸವೇಶ್ವರ ಶಿಕ್ಷಣ ಮಹಾವಿದ್ಯಾಲಯ, ಬೀದರ್ | 1+8 | 14 |
| 13 | ಬಿ.ಎಲ್.ಡಿ.ಇ.ಎ. ಸಂಸ್ಥೆಯ ಜೆ.ಎಸ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಬಿಜಾಪುರ. | 1+9 | 14 |
| 14 | ಶ್ರೀ ಜಗದ್ಗುರು ಪಂಚಚಾರ್ಯ ಶಿಕ್ಷಣ ಮಹಾವಿದ್ಯಾಲಯ, ಗದಗ. | 1+8 | 12 |
| 15 | ಗೋಲ್ಡ್ ಫೀಲ್ಡ್ ಮಹಾವಿದ್ಯಾಲಯ, ಬಂಗಾರಪೇಟೆ, ಕೋಲಾರ ಜಿಲ್ಲೆ. | 1+9 | 13 |
| 16 | ಶ್ರೀ ಸಿದ್ದಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು. | 8 | 11 |
| 17 | ಕಿತ್ತೂರುರಾಣಿ ಚನ್ನಮ್ಮ ಶಿಕ್ಷಣ ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯ, ಬೈಲಹೊಂಗಲ, ಬೆಳಗಾಂ ಜಿಲ್ಲೆ. | 1+7 | 09 |
| 18 | ಟಿ.ಎಂ.ಎ.ಇ. ಶಿಕ್ಷಣ ಮಹಾವಿದ್ಯಾಲಯ, ಗಂಗಾವತಿ | 1+6 | 16 |
| 19 | ಎಸ್.ಆರ್.ಕಂಠಿ ಶಿಕ್ಷಣ ಮಹಾವಿದ್ಯಾಲಯ, ಇಳಕಲ್, ಹುನಗುಂದ ತಾಲ್ಲೂಕು, ಬಾಗಲಕೋಟೆ | 1+9 | 09 |
| 20 | ಶ್ರೀ ಕ್ರಾಂತಿವೀರಸಂಗೊಳ್ಳಿ ರಾಯಣ್ಣ ಶಿಕ್ಷಣ ಮಹಾವಿದ್ಯಾಲಯ, ಬೆಳಗಾಂ | 1+9 | 14 |
| 21 | ಹಾಸನಾಂಬ ಶಿಕ್ಷಣ ಮಹಾವಿದ್ಯಾಲಯ, ಹಾಸನ. | 1+7 | 10 |

**ಷರತ್ತುಗಳು:**

(1) ಕಾಲೇಜು ದಿನಾಂಕ:01–06–1987ರ ಪೂರ್ವದಲ್ಲಿ ಪ್ರಾರಂಭಿಸಿ ನಿರಂತರವಾಗಿ ನಡೆಯುತ್ತಿರಬೇಕು.

(2) ಪ್ರತಿ ಕಾಲೇಜಿನಲ್ಲಿ ಅನುದಾನ ಸಂಹಿತೆ ಪ್ರಕಾರ ಅಗತ್ಯ ಸೌಲಭ್ಯ ಹೊಂದಿರಬೇಕು.

(3) ಪ್ರತಿ ಕಾಲೇಜಿಗೆ ಸಂಬಂಧಿಸಿದಂತೆ ಅನುದಾನ ಸಂಹಿತೆ ಪ್ರಕಾರ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ನಿಗದಿಪಡಿಸಿರಬೇಕು ಹಾಗೂ ಸದರಿ ಕಾಲೇಜು ಆ ಹುದ್ದೆಗಳನ್ನು ಪಡೆಯಲು ಅನುದಾನ ಸಂಹಿತೆ ಪ್ರಕಾರ ಎಲ್ಲಾ ಅರ್ಹತೆ ಪಡೆದಿರುತ್ತದೆ ಎಂದು ದೃಢೀಕರಿಸಬೇಕು. ಹುದ್ದೆಗಳನ್ನು ಭರ್ತಿ ಮಾಡುವ ಮುನ್ನ ಸಂಬಂಧಿಸಿದ ಇಲಾಖೆಯಿಂದ ಪೂರ್ವಾನುಮತಿ ಪಡೆದಿರಬೇಕು. ಒಂದು ವೇಳೆ ಪೂರ್ವಾನುಮತಿ ಪಡೆಯದಿದ್ದರೆ ಈಗ ಸದರಿ ಹುದ್ದೆಗಳ ನೇಮಕಾತಿ ಬಗ್ಗೆ ಅಂದರೆ ಅನುದಾನ ಸಂಹಿತೆ ಹಾಗೂ ಎನ್.ಸಿ.ಟಿ.ಇ. ನಿಯಮಗಳನುಸಾರ ವಿದ್ಯಾರ್ಹತೆ, ವಯೋಮಿತಿ ಹಾಗೂ ನೇಮಕಾತಿ ನಿಯಮಗಳನ್ನು ಪಾಲಿಸಿರುವ ಬಗ್ಗೆ ಪರಿಶೀಲಿಸಿ ಅನುಮೋದನೆ ಪಡೆಯತಕ್ಕದ್ದು. ನಂತರವೇ ಕಾಲೇಜಿನಿಂದ ನೇಮಕ ಮಾಡಿರುವ ಅಭ್ಯರ್ಥಿಯ ನೇಮಕಾತಿಗೆ ವೇತನಾನುದಾನ ಸಹಿತ ಅನುಮೋದನೆ ಪಡೆಯಬೇಕು.

(4) ಬೋಧಕೇತರ ಹುದ್ದೆಗಳನ್ನು ದಿನಾಂಕ:01–06–1992ರ ಮುಂಚೆ ಪೂರ್ವಾನುಮತಿ ಪಡೆದು ನೇಮಕ ಮಾಡಿದ್ದರೆ ಮಾತ್ರ ಪರಿಗಣಿಸಬೇಕು.

(5) ಮೀಸಲಾತಿಗೆ ಸಂಬಂಧಿಸಿದಂತೆ ಸರ್ಕಾರವು ಹೊರಡಿಸಿರುವ ಆದೇಶ ಸಂ. ಇಡಿ 227 ಎಸ್‌ಇಪಿ 94, ದಿನಾಂಕ:21–04–95 ಹಾಗೂ ಕಾಲಕಾಲಕ್ಕೆ ಹೊರಡಿಸಿರುವ ಆದೇಶ ಹಾಗೂ ಸಿಆಸುಇ (ಸೇವಾ ನಿಯಮಗಳು) ನೀಡಿರುವ ಮಾರ್ಗಸೂಚಿಗಳನ್ನು ಪಾಲಿಸಿರಬೇಕು. ಪ್ರತಿ ಕಾಲೇಜು ಪಾಲಿಸಿರುವ ಬಗ್ಗೆ ಸಂಬಂಧಿಸಿದ ಅಧಿಕಾರಿ ದೃಢೀಕರಿಸಬೇಕು.

(6) ಸಚಿವ ಸಂಪುಟದ ನಿರ್ಣಯದ ದಿನಾಂಕ:03–10–2007ರ ನಂತರ ಕಾಲೇಜು ಮಾಡಿಕೊಂಡಿರುವ ನೇಮಕಗಳನ್ನು ಅದು ಅನುಮೋದನೆ ನೀಡುವ ಬಗ್ಗೆ ಪ್ರತ್ಯೇಕವಾಗಿ ಪರಿಶೀಲಿಸಿ ಅರ್ಹವಾಗಿದ್ದರೆ ಅನುದಾನ ರಹಿತವಾಗಿ ಪ್ರಥಮದಲ್ಲಿ ಒಪ್ಪಿಗೆ ನೀಡಿ ವೇತನಾನುದಾನಕ್ಕೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸಬೇಕು.

(7) ಪ್ರಸ್ತಾಪಿತ ಕಾಲೇಜುಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಯಾವುದೇ ವಿವಾದ ಇರುವುದಿಲ್ಲ ಎಂಬುದನ್ನು ದೃಢಪಡಿಸಿಕೊಳ್ಳಬೇಕು.

(8) ಈ ಸಂಬಂಧ ಅಗತ್ಯವಾದ ಅನುದಾನವನ್ನು ಇತರೆ ಯೋಜನಾ ಮಿತಿಯಲ್ಲಿ ಒದಗಿಸಿಕೊಳ್ಳತಕ್ಕದ್ದು.

(9) ವೇತನಾನುದಾನವು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

(10) ಮೇಲ್ಕಂಡ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಕ್ರ.ಸಂ. 15ರಲ್ಲಿರುವ ಗೋಲ್ಡ್ ಫೀಲ್ಡ್ ಶಿಕ್ಷಣ ಮಹಾವಿದ್ಯಾಲಯ, ಬಂಗಾರಪೇಟೆಯ ಪ್ರಾಂಶುಪಾಲರ ಒಂದು ಹುದ್ದೆ ಹಾಗೂ ಕ್ರ.ಸಂ. 21ರಲ್ಲಿರುವ ಹಾಸನಾಂಬ ಶಿಕ್ಷಣ ಮಹಾವಿದ್ಯಾಲಯ, ಹಾಸನದ ಒಂದು ಬೋಧಕೇತರ ಹುದ್ದೆಯ ನೇಮಕಾತಿ ಪ್ರಕರಣವು ನ್ಯಾಯಾಲಯದ ಮುಂದೆ ಇರುವುದರಿಂದ ಈ ಹುದ್ದೆಗಳನ್ನು ಹೊರತುಪಡಿಸಲಾಗಿದೆ.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 1260/ವೆಚ್ಚ–8/2008, ದಿನಾಂಕ:04–03–2009ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ(ವಿಶ್ವವಿದ್ಯಾಲಯಗಳು).

ಪಿ.ಆರ್.1285

## FOREST, ECOLOGY AND ENVIRONMENT SECRETARIAT

**Sub:** Diversion of 17.61ha. of forest land (8.96 ha. in Bellary Forest division and 8.65 ha. in Davangere Forest Division) for establishing 18.75 MW Wind Power Project in favour of M/s Suzlon Infrastructure Ltd., Bangalore.

**Read:** 1) Letter No.A5(5) GFL Wind Power.CR.7/06-07, Dated:30.11.2006 of Principal Chief Conservator of Forests, Bangalore.

2) State Government letter No.FEE 209 FLL 2006, Dated:02.04.2007.

3) Letter No.4-KRC330/2007-BAN/508, Dated:01.08.2007 of Government of India, Ministry of Environment and FOrests, Regional Office, Southern Zone, Bangalore.

4) Letter No. A5(5) GFL.CR.7/06-07, Dated:27.12.2008 of Principal Chief Conservator of Forests, Bangalore.

5) State Government letter No. FEE 209 FLL 2006, Dated:11.02.2009.

6) Letter No.4-KRC330/2007-BAN-3863, Dated:27.02.2009 of Government of India, Ministry of Environment and Forests, Regional Office, Southern Zone, Bangalore.

**Preamble:**

The Principal Chief Conservator of Forests, Bangalore vide his letter Dated:30.11.2006 read at (1) above has submitted the proposal to obtain the approval of Government of India under Section 2 of The Forest (Conservation) Act, 1980 for diversion of 17.61ha. forest land (8.96 ha. of forest land in Sogi RF, Hadagali Range of Bellary Forest Division & 8.65 ha. of forest land in Sogi and Jajikalgudda RF, Harappanahalli Range of Davangere Forest Division) for establishing 18.75 MW Wind Power Project in favour of M/s Suzlon Inffrastructure Ltd., Bangalore esubject to certain conditions.

Accordingly the proposal was recommended to Government of India vide State Government letter Dated:02.04.2007 read at (2) above.

The Government of India, Ministry of Environment and Forests, Regional office, Bangalore vide their letter Dated:01.08.2007 read at (3) above has givne its approval in Principle (Stage-I) for diversion of 17.61ha. forest land (8.96 ha. of forest land in Sogi RF, Hadagali Range of Bellary Forest Division & 8.65 ha. of forest land in Sogi and Jajikalgudda RF, Harappanahalli Range of Davangere Forest Division) for establishing 18.75 MW Wind Power Project in favour of M/s Suzlon Infrastructure Ltd., Bangalore subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter Dated:27.12.2008 furnished the compliance report reat at (4) above and the same has been sent to Government of India vide State Government letter Dated:11.02.2009 read at (5) above.

Government of India Ministry of Environment and Forests, Regional Office, South Zone, Bangalore vide their letter Dated:27.02.2009 read at (6) above has conveyed its approval (Stage-II) under Section 2 of The Forest (Conservation) Act, 1980 for diversion of 17.61 ha. forest land (8.96 ha. of forest land in Sogi RF, Hadagali Range of Bellary Forest Division & 8.65 ha. of forest land in Sogi and Jajikalgudda RF, Harappanahalli Range of Davangere Forest Division) for establishing 18.75 MW Wind Power Project in favour of M/s Suzlon Infrastructure Ltd., Bangalore subject to certain conditions.

The proposal has been exammed in detail and hence the order.

**Government Order No.FEE, 209 FLL 2006, Bangalore, Dated:5th March, 2007**

In the Circumstances explained in the preamble above, Government are pleased to accord sanction under Section 2 of The Forest (Conservation) Act, 1980 for diversion of 17.61 ha. forest land (8.96 ha. of forest land in Sogi RF, Hadagali Range of Bellary Forest Division & 8.65 ha. of forest land in Sogi and Jajikalgudda RF, Harappanahalli Range of Davangere Forest Division) for establishing 18.75 MW Wind Power Project in favour of M/s Suzlon Infrastructure Ltd., Bangalore subject to the following conditions.

1) The legal Status of the forest land shall remain unchanged.
2) Compensatory Afforestation shall be raised over of equivalent identified non-forest land in Sy.No.225 of Kakubal village of Hospet Taluk, Bellary District at the cost of user agency. The State Government shall obtain prior permission of Central Government for change of location and schedule of CA if any.
3) Non-forest land for compensatory afforestation shall be notified by the State Government as RF/PF under Indian Forest Act, 1927 of the State Forest Act within a period of 6 months and Nodal Officer (Forest Convservation) shall report the compliance within 6 months.
4) The user agency shall demarcate the project area by creating cairns (60 cm. high) with available stones and indicate the marking of forward and backward bearing this cairns. After construction of approach road as per the project plan, this cairns shall be substituted by foour feet high RCC pillars at the project cost indicating on cach pillar the forward and backward bearing as well as distrance between the adjacent pillars.
5) The alignment of roads in the proposed area shall be done by a recongnized firm and got approved by the DFO concerned before implementation of the project. The approached road will, however be available for use of the Forest Department of any person authorised by the Forest Department.
6) The additional amount of the Net Present Value (NPV) of the diverted forest land if any, due as per the orders of the Hon'ble Supreme Court Dated:28.03.2008 and 09.05.2008 in I.A. Nos. 826 in 566 with related IA's in Writ Petition (Civil) No.202/1995 shall be realised from the user agency and transferred to Ad-hoc CAMPA in account number CA-1578 of Corporation Bank, Block-II, CGO Complex, Phase-1, Lodhi Road, New Delhi-110 003.

7) The funds received from the user agency towards AC, lease rent and NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110003 with an intimation to Government of India.
8) The lease period shall be for 30 years as per the guidelines issued by MOEF vide letter No.8-84/2002-FC, Dated:14.05.2004. In case the user agency proposes to transfer the lease in favour of developers, it shall be done within a period of 4 years from the date of issue of this approval. In case the developers fail to develop wind farm, the land shall be reverted back to Forest Department without any compensation.
9) The vane tips of the wind turbine shall be painted with orange coolour to avoid bird hits. The location of the wind mill shall be such that it does not stand in the migratory path of the birds and is not near the breading sities of the migratory birds.
10) The lease rent of Rs.30,000/- per MW for realished from the user agency shall be utilised in providing gas connections to the local villagers under the Joint Forest Management Programme and the other conservation measures.
11) About 65-70% of leased out area in the wind farm shall be utilized for developing medicinal plant gardens, if possible, by the State Forest Department at the project cost. For this purpose the help of National Medicinal Plant Board in creating corridors of medicinal plant gardens may be taken. The intervening areas between two wing mills footprints should also be planted up by dwarf species of trees at the project cost.
12) Soil and moisture conservation measures like contour trenching shall be taken up on the hillocks supporting the wind mill at the cost of user agency.
13) Adequate fire protection measures, including employment of fire watchers and maintenance of fire lines etc., shall be undertaken by the user agency in and around the project area at its own cost.
14) Within the perimeters of wind farm, smaller turbines may be allowed for optimization of wind energy.
15) The wind turbines/ wind mills to be used on forest land and the applicability of such technology in the country should have general recognition of the Ministry of Non-Conventional Energy Sources, Government of India.
16) The State Government shall ensure that the project area does not form part of any National Park/ Sanctuary.
17) The total forest area utilized for the project shall not exceed 17.61 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
18) The land shall be utilized only for the purpose for which it is released.
19) The user agency has to pay the lease rent as fixed by the Government at the time of sanction and any subesequent order in this regard.
20) Karnataka Forest Act 1963 and Rules 1969 will be applicable for any violation.
21) Compensatory afforestation shall be raised at the cost of user agency over equivalent non-forest land at the rate of prevailing at the time of approval (at present it is Rs.84,000/- per ha.)
22) Traingulation points if any found on the hillocks should be identified and protective measures have to be taken up at the time of erection of Wind Mills.
23) The user agency has to pay the Net present value (NPV) fixed by Government vide Notification No.FEE 247 FGL 2002, Dated:17.01.2004 and as per the latest order of Hon'ble Supreme Court.

24) The user agency has to abide by all the terms and conditions as laid by Government of India as per the guidelines Dated:14.05.2004.

25) Any other condition to be stipulated by/ Government of India/ State Government/ Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**P.R. KALAVATHI**

PR-872

Under Secretary to Government,

Forest, Ecology and Environment Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ ಅನುದಾನವನ್ನು ಪುನರ್ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ:07.04.2005.

2) ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ:03.03.2009.

3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ ಎಸ್‌ಜೆವೈ 2008, ದಿನಾಂಕ:29.07.2008, 16.02.2009 ಮತ್ತು 02.03.2009.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ 2008–2009ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲಿನ ಅನುದಾನ ರೂ.2562.39 ಲಕ್ಷಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಹಂಚಿಕೆ ಮಾಡಿದೆ. ಆದರೆ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ವಿಶೇಷ ಯೋಜನೆಗೆ ಅಲಾಯಿದ ಹಂಚಿಕೆ ನೀಡಿರುವುದಿಲ್ಲ. ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿರುವುದರಿಂದ ರಾಜ್ಯವು ಕೇಂದ್ರದ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಬೇಕಾಗಿದೆ. ಸದರಿ ಸಾಲಿನಲ್ಲಿ ಎಸ್‌ಜಿಎಸ್‌ವೈ ಯಡಿ ಬಾಗಲಕೋಟೆ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಒಂದೊಂದು ವಿಶೇಷ ಯೋಜನೆ ಮಂಜೂರಾಗಿದೆ. ಇದಲ್ಲದೆ ಚಾಮರಾಜನಗರ ಜಿಲ್ಲಾ ಪಂಚಾಯತಿಗೆ ಕೇಂದ್ರ ಸರ್ಕಾರ ಹೆಚ್ಚಿನ ಅನುದಾನ ನೀಡಿದೆ. ಇದಲ್ಲದೆ ಬೆಂಗಳೂರು (ಗ್ರಾ), ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಸರ್ಕಾರ ಸದರಿ ವರ್ಷದಲ್ಲಿ ಅನುದಾನವನ್ನು ಪುರ್ನನಿಗದಿ ಪಡಿಸಿದ್ದು, ಇದಕ್ಕನುಗುಣವಾಗಿ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲಿನ ಅನುದಾನ ನಿಗದಿಪಡಿಸಿರುವುದಿಲ್ಲ. ಆದ ಕಾರಣ, ರಾಜ್ಯದ ಪಾಲು ಬಿಡುಗಡೆ ಮಾಡಲು ತೊಂದರೆಯಾಗಿದ್ದು, ಓದಲಾಗಿದೆ (3)ರ ಆದೇಶದಲ್ಲಿ ಲಭ್ಯತೆ ಆಧಾರದ ಮೇಲೆ ಬಿಡುಗಡೆ ಮಾಡಲಾಗಿತ್ತು. ಇದಲ್ಲದೆ ಚಾಮರಾಜನಗರ ಜಿಲ್ಲಾ ಪಂಚಾಯತಿಗೆ ರಾಜ್ಯದ ಆಯವ್ಯಯದಲ್ಲಿ ಸಾಕಷ್ಟು ಅನುದಾನ ಲಭ್ಯವಿಲ್ಲದ ಕಾರಣ, ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಲಭ್ಯತೆ ಆಧಾರದ ಮೇಲೆ ಬಿಡುಗಡೆ ಮಾಡಲಾಗಿತ್ತು. ಆದುದರಿಂದ ರಾಜ್ಯದ ಪಾಲು ಬಿಡುಗಡೆ ಮಾಡಲು ಬಿಜಾಪುರ ರೂ.22,88,000, ಕೊಡಗು ರೂ.8,19,000, ಕೊಪ್ಪಳ ರೂ.25,85,000, ಮಂಡ್ಯ ರೂ.30,76,000, ರಾಯಚೂರು ರೂ.23,65,000, ತುಮಕೂರು ರು.21,01,000 ಜಿಲ್ಲಾ ಪಂಚಾಯತ್‌ಗಳಲ್ಲಿ ಉಳಿಯಬಹುದಾದ ಒಟ್ಟು ರೂ.1,32,34,000ಗಳನ್ನು ಪುನರ್ವಿನಿಯೋಗಿಸಿಕೊಂಡು ಬಾಗಲಕೋಟೆ, ಬೆಂಗಳೂರು ಗ್ರಾ, ಚಿಕ್ಕಬಳ್ಳಾಪುರ, ಚಾಮರಾಜನಗರ, ದಕ್ಷಿಣ ಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತ್‌ಗಳಿಗೆ ನೀಡಲು ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಓದಲಾದ (2)ರ ಆದೇಶದಲ್ಲಿ ಒಪ್ಪಿರುತ್ತಾರೆ. ಈ ಅನುದಾನದೊಂದಿಗೆ ಜಿಲ್ಲೆಯಲ್ಲಿ ಉಳಿದಿರುವ ಅನುದಾನವನ್ನು ಉಪಯೋಗಿಸಿಕೊಂಡು ಒಟ್ಟು ರೂ.1,36,60,000 ಗಳನ್ನು ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 65 ಎಸ್‌ಜೆವೈ 2008, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2009**

ಸ್ವರ್ಣಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ 2008–2009ನೇ ಸಾಲಿಗೆ ರಾಜ್ಯ ಸರ್ಕಾರವು ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ಚಾಮರಾಜನಗರ, ದಕ್ಷಿಣ ಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತ್‌ಗಳಿಗೆ ರೂ.1,36,60,000ಗಳನ್ನು (ರೂ. ಒಂದು ಕೋಟಿ ಮೂವತ್ತಾರು ಲಕ್ಷದ ಅರವತ್ತು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಪುನರ್ವಿನಿಯೋಗದ ನಂತರ ಬಿಡುಗಡೆ ಮಾಡಿದ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1. | ಬಾಗಲಕೋಟೆ | 461 | 2900ZZ0001 | 32,06,000 |
| 2. | ಬೆಂಗಳೂರು ಗ್ರಾಮಾಂತರ | 402 | 0300 ZZ8001 | 6.21,000 |
| 3. | ಚಿಕ್ಕಬಳ್ಳಾಪುರ | 453 | 0600 ZZ0001 | 19,50,000 |
| 4. | ಚಾಮರಾಜನಗರ | 456 | 1000 ZZ0001 | 20,46,000 |

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಪುನರ್ವಿನಿಯೋಗದ ನಂತರ ಬಿಡುಗಡೆ ಮಾಡಿದ ಮೊತ್ತ (ರೂ.ಗಳಲ್ಲಿ) |
|---|---|---|---|---|
| 5. | ದಕ್ಷಿಣ ಕನ್ನಡ | 409 | 1900 ZZ0047 | 44,21,000 |
| 6. | ರಾಮನಗರ | 452 | 0400 ZZ0001 | 14,16,000 |
| | | | ಒಟ್ಟು ರೂ: | **1,36,60,000** |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಬಾಗಲಕೋಟೆ ಜಿಲ್ಲಾ ಪಂಚಾಯತಿಗೆ ಎಸ್‌ಜಿಎಸ್‌ವೈ ವಿಶೇಷ ಯೋಜನೆಯಡಿ ಬಿಡುಗಡೆ ಮಾಡಿರುವ ಅನುದಾನವನ್ನು skill based training for rural BPL families in Bagalkote and Bijapur Districts through BVS Sangha ಯೋಜನೆಗೆ ಕೇಂದ್ರ ಸರ್ಕಾರ ಮಂಜೂರಾತಿ ನೀಡಿ ಮೊದಲನೇ ಕಂತಿನ ಅನುದಾನ ರೂ.96,19,000 ಬಿಡುಗಡೆಗೊಳಿಸಿದ್ದು, ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.32,06,000 ಬಿಡುಗಡೆ ಮಾಡಲಾಗಿದೆ.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಎಸ್‌ಜಿಎಸ್‌ವೈ ವಿಶೇಷ ಯೋಜನೆಯಡಿ ಬಿಡುಗಡೆ ಮಾಡಿರುವ ಅನುದಾನವನ್ನು ಶ್ರೀ ಕ್ಷೇತ್ರ ಧರ್ಮಸ್ಥಳದ income generation activities in farm and non farm sector ಉದ್ದೇಶಕ್ಕಾಗಿ ಕೇಂದ್ರ ಸರ್ಕಾರ ಮೂರನೇ ಹಾಗೂ ಅಂತಿಮ ಕಂತಿನ ಅನುದಾನ ರೂ.1,32,60,000 ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.44,21,000 ಬಿಡುಗಡೆ ಮಾಡಲಾಗಿದೆ.

ಬಾಗಲಕೋಟೆ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳು ಬಿಡುಗಡೆ ಮಾಡಿದ ಅನುದಾನವನ್ನು ಮಂಜೂರಾದ ಎಸ್‌ಜಿಎಸ್‌ವೈ ವಿಶೇಷ ಯೋಜನೆಯ ಉದೇಶಕ್ಕಾಗಿಯೇ ಬಳಸತಕ್ಕದ್ದು. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14.07.2005ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡದೆ ಬಿಳಿ ಬಣ್ಣದ ಸಹಾಯ ಅನುದಾನದ ಬಿಲ್ ಮೂಲಕ ಪಡೆದು ಎಸ್‌ಜಿಎಸ್‌ವೈ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ಚೆಕ್ ಮೂಲಕ ಸಂಬಂಧಪಟ್ಟ ವಿಶೇಷ ಯೋಜನೆ ಮಂಜೂರಾದ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501–ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14.07.2005ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಬಾಗಲಕೋಟೆ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 4 ಜಿಲ್ಲಾ ಪಂಚಾಯತಿಗಳು ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007 ದಿನಾಂಕ:18.04.2007ರ ಸೂಚನೆಯಂತೆ ಕ್ರಮಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

ಬಾಗಲಕೋಟೆ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳು ಆಯಾ ಮಾಹೆಯ ಪ್ರಗತಿ ವರದಿಯನ್ನು ವಿಶೇಷ ಯೋಜನೆ ಅನುಷ್ಠಾನಗೊಳಿಸುವ ಸಂಸ್ಥೆಯಿಂದ ಪಡೆದು ಹಾಗೂ ಉಳಿದ 4 ಜಿಲ್ಲಾ ಪಂಚಾಯತಿಗಳು ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 94 ಪಿಬಿಎಸ್ 2009 ದಿನಾಂಕ:11.03.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.877